# ವಿವೇಕಪ್ರಭ

ಜುಲೈ-2018 ಸಂಪುಟ 19 ಸಂಚಿಕೆ 07



## ವಿಶೇಷ ಲೇಖನ



## ಧಾರಾವಾಹಿ












ವ್ಯವಸ್ಥಾಪಕ ಸಂಪಾದಕರು: ಸ್ವಾಮಿ ಆತ್ಮಜ್ಞಾನಂದ ಸಂಪಾದಕರು: ಸ್ವಾಮಿ ಜ್ಞಾನಯೋಗಾನಂದ
ನೆರವು: ಆರ್. ಎಸ್. ಪೂರ್ಣಾನಂದ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಡಾ. ಎಚ್. ಪಾಂಡುರಂಗ ವಿಠಲ
ಅಕ್ಷರ ಜೋಡಣೆ: ಶ್ರೀರಾಮಕೃಷ್ಣ ಆಶ್ರಮ, ಮೈಸೂರು ಮುದ್ರಣ: ಮಯೂರ್ ಗ್ರಾಫಿಕ್ಸ್, ಬೆಂಗಳೂರು

ಮುಖಪುಟ
'ಜ್ಯೋತಿಷಾಂ ರವಿರಂಶುಮಾನ್'

### ಚಂದಾ ವಿವರ

ಬಿಡಿ ಪ್ರತಿ : ₹ 14 ವಾರ್ಷಿಕ : ₹ 140 ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000 ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್) ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300 ಪೋಷಕರು : $ 600 ಅಥವಾ ಹೆಚ್ಚು.

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'
- ಸ್ವಾಮಿ ವಿವೇಕಾನಂದ

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

E-mail: mysuru.vivekaprabha@rkmm.org Website: www.vivekaprabha.net ಫೋನ್ : 9481533505

## ಪ್ರಾರ್ಥನೆ

# ಶ್ರೀಸುಬ್ರಹ್ಮಣ್ಯಪಂಚರತ್ನಮ್



ಷಡಾನನಂ ಚಂದನಲೇಪಿತಾಂಗಂ
ಮಹಾಮತಿಂ ದಿವ್ಯಮಯೂರವಾಹನಮ್ ।
ರುದ್ರಸ್ಯ ಸೂನುಂ ಸುರಲೋಕನಾಥಂ
ಬ್ರಹ್ಮಣ್ಯದೇವಂ ಶರಣಂ ಪ್ರಪದ್ಯೇ ॥ ೧ ॥

ಆರು ಮುಖಗಳನ್ನು ಹೊಂದಿರುವ, ಶ್ರೀಗಂಧವನ್ನು ಲೇಪಿಸಿಕೊಂಡಿರುವ ದೇಹದಿಂದ ಶೋಭಿಸುವ, ಮಹಾಮತಿಯಾದ, ದಿವ್ಯವಾದ ನವಿಲನ್ನು ತನ್ನ ವಾಹನವನ್ನಾಗಿ ಮಾಡಿಕೊಂಡಿರುವ, ರುದ್ರನ ಮಗನಾದ ಹಾಗೂ ದೇವಲೋಕದ ನಾಯಕನಾದ ಶ್ರೀ ಸುಬ್ರಹ್ಮಣ್ಯದೇವನಲ್ಲಿ ಶರಣಾಗತನಾಗಿದ್ದೇನೆ.

ಜಾಜ್ವಲ್ಯಮಾನಂ ಸುರಬೃಂದವಂದ್ಯಂ
ಕುಮಾರಧಾರಾತಟಮಂದಿರಸ್ಥಮ್ ।
ಕಂದರ್ಪರೂಪಂ ಕಮನೀಯಗಾತ್ರಂ
ಬ್ರಹ್ಮಣ್ಯದೇವಂ ಶರಣಂ ಪ್ರಪದ್ಯೇ ॥ ೨ ॥

ಜಾಜ್ವಲ್ಯಮಾನನಾದ, ಸುರಗಣಗಳಿಂದ ವಂದಿಸಲ್ಪಡುವ, ಕುಮಾರಧಾರಾ ನದಿಯ ತಟದಲ್ಲಿರುವ (ಶ್ರೀ ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರವೆಂಬ) ಮಂದಿರದಲ್ಲಿ ನೆಲೆಸಿರುವ, ಮನ್ಮಥನಂತೆ ಸುಂದರನಾದ, ಅಸಾಧಾರಣ ದೇಹವನ್ನು ಹೊಂದಿರುವ ಶ್ರೀಸುಬ್ರಹ್ಮಣ್ಯ ದೇವನಲ್ಲಿ ಶರಣಾಗತನಾಗಿದ್ದೇನೆ.

ದ್ವಿಷಡ್ಭುಜಂ ದ್ವಾದಶದಿವ್ಯನೇತ್ರಂ
ತ್ರಯೀತನುಂ ಶೂಲಮಸಿಂ ದಧಾನಮ್ ।
ಶೇಷಾವತಾರಂ ಕಮನೀಯರೂಪಂ
ಬ್ರಹ್ಮಣ್ಯದೇವಂ ಶರಣಂ ಪ್ರಪದ್ಯೇ ॥ ೩ ॥

ಹನ್ನೆರಡು ಭುಜಗಳಿಂದಲೂ, ದಿವ್ಯವಾದ ಹನ್ನೆರಡು ಕಣ್ಣುಗಳಿಂದ, ಮೂರು ದೇಹಗಳಿಂದ ಕೂಡಿದ, ಶೂಲ ಹಾಗೂ ಖಡ್ಗವನ್ನು ಧರಿಸಿದ, ಶೇಷಾವತಾರನಾದ, ಸುಂದರ ಆಕಾರವುಳ್ಳ ಶ್ರೀ ಸುಬ್ರಹ್ಮಣ್ಯ ದೇವನಲ್ಲಿ ಶರಣಾಗತನಾಗಿದ್ದೇನೆ.

ಸುರಾರಿಘೋರಾಹವಶೋಭಮಾನಂ
ಸುರೋತ್ತಮಂ ಶಕ್ತಿಧರಂ ಕುಮಾರಮ್ ।
ಸುಧಾರಶಕ್ತ್ಯಾಯುಧಶೋಭಿಹಸ್ತಂ
ಬ್ರಹ್ಮಣ್ಯದೇವಂ ಶರಣಂ ಪ್ರಪದ್ಯೇ ॥ ೪ ॥

ದೇವತೆಗಳ ವೈರಿಯಾದ ಅಸುರರೊಂದಿಗೆ ನಡೆದ ಘೋರ ಯುದ್ಧದಲ್ಲಿ ತನ್ನ ಶೌರ್ಯದಿಂದ ಶೋಭಿಸಿದ, ದೇವತೆಗಳಲ್ಲೆಲ್ಲ ಅತ್ಯುತ್ತಮನಾದ, ಶಕ್ತಿಯನ್ನೇ ತನ್ನಲ್ಲಿ ಧರಿಸಿರುವ, (ಪರಶಿವನ) ಕುಮಾರನಾದ, 'ಕುಮಾರ' ನೆಂದೇ ಜಗತ್ಪ್ರಸಿದ್ಧನಾದ, ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಶೋಭಿಸುತ್ತಿರುವ ಶ್ರೀಸುಬ್ರಹ್ಮಣ್ಯ ದೇವನಲ್ಲಿ ಶರಣಾಗತನಾದ್ದೇನೆ.

ಇಷ್ಟಾರ್ಥಸಿದ್ಧಿಪ್ರದಮೀಶಪುತ್ರಂ
ಮಿಷ್ಟಾನ್ನದಂ ಭೂಸುರಕಾಮಧೇನುಮ್ ।
ಗಂಗೋದ್ಭವಂ ಸರ್ವಜನಾನುಕೂಲಂ
ಬ್ರಹ್ಮಣ್ಯದೇವಂ ಶರಣಂ ಪ್ರಪದ್ಯೇ ॥ ೫ ॥

ಇಷ್ಟಾರ್ಥಸಿದ್ಧಿಯನ್ನು ನೀಡುವ ಈಶ್ವರನ ಪುತ್ರನಾದ, ಸ್ವಾದಿಷ್ಟವಾದ ಅನ್ನವನ್ನು ನೀಡುವ, ಬ್ರಾಹ್ಮಣರಿಗೆ ಕಾಮಧೇನುವಿನಂತೆ ಬಯಸಿದ್ದನ್ನು ನೀಡುವ, ಗಂಗೋದ್ಭವನಾದ, ಸಕಲ ಜನರಿಗೂ ಅನುಕೂಲವನ್ನು ದಯಪಾಲಿಸುವ, ಶ್ರೀ ಸುಬ್ರಹ್ಮಣ್ಯ ದೇವನಲ್ಲಿ ಶರಣಾಗತನಾಗಿದ್ದೇನೆ.

## ಸೂಕ್ತಿಪ್ರಭ

# ಗುರುಮಹಿಮೆ

ಕೇವಲ ಸಚ್ಚಿದಾನಂದನೇ ಗುರು. ಮನುಷ್ಯನು ಗುರುವಿನ ಪಟ್ಟ ಧರಿಸಿ ಜನರಲ್ಲಿ ಆತ್ಮಜಾಗೃತಿಯನ್ನು ಉಂಟುಮಾಡಿದ್ದೇ ಆದರೆ, ಆಗ ತಿಳಿದುಕೊಳ್ಳಬೇಕು, ಸಚ್ಚಿದಾನಂದನೇ ಆ ರೂಪ ಧರಿಸಿದ್ದಾನೆ ಎಂಬುದಾಗಿ. ಗುರು ಒಬ್ಬ ಸ್ನೇಹಿತ ಇದ್ದ ಹಾಗೆ. ಆತ ಕೈಹಿಡಿದು ಕರೆದುಕೊಂಡು ಹೋಗುತ್ತಾನೆ. ಭಗವಂತನ ದರ್ಶನವಾದ ನಂತರ ಗುರು-ಶಿಷ್ಯರ ಭೇದವಿರದು.

— ಶ್ರೀರಾಮಕೃಷ್ಣರು

ನಿಜವಾದ ಗುರುವು ಕಣ್ಣಿನ ಪರೆಯನ್ನು ತೆಗೆದು ನಮ್ಮ ನಿಜಧಾಮದ ದರ್ಶನವನ್ನು ನೀಡುತ್ತಾನೆ. ಓ ನಾನಕ್, ದೇಹದಲ್ಲಿಯೇ ಭಗವದ್ಧಾಮವನ್ನು ತೋರಿಸುವವನೇ ನಿಜವಾದ ಗುರು.

— ಗುರುನಾನಕ್

ಆತ್ಮನು ಹಲವರಿಗೆ ಕೇಳುವುದಕ್ಕೂ ಸಿಗಲಾರನು. ಕೇಳಿದ ಮೇಲೆ ಅವನನ್ನು ಅರಿಯುವವರೂ ವಿರಳರೇ. ಆತ್ಮನ ವಿಚಾರವನ್ನು ಕಲಿಸುವ ಗುರು ಅತ್ಯದ್ಭುತನಾದವನು; ಅಂತೆಯೇ ಅದನ್ನು ತಿಳಿದುಕೊಳ್ಳುವ ಶಿಷ್ಯನೂ ಅತ್ಯದ್ಭುತ ಮೇಧಾವಿ — ಹೀಗಿದ್ದರೆ ಮಾತ್ರ ಆತ್ಮಜ್ಞಾನ ಸಾಧ್ಯವಾಗುವುದು.

— ಕಠೋಪನಿಷತ್

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವ ಕೆಂಡ ನುಂಗಿದಂತೆ
ಗುರುಚರಣದ ಮೇಲೆ ತನುತೃಣವನಿಳುಹಿದರೆ
ಆತನ ಸರ್ವಾಂಗವೆಲ್ಲಾ ಲಿಂಗ ಕಾಣಾ ರಾಮನಾಥ!

— ದೇವರ ದಾಸಿಮಯ್ಯ

# ರಾಮಕೃಷ್ಣ ಮಿಷನ್ ಆಶ್ರಮ

(ರಾಮಕೃಷ್ಣ ಮಿಷನ್, ಬೇಲೂರು ಮಠ, ಹೌರಾ 711 002 ಇದರ ಒಂದು ಶಾಖಾಕೇಂದ್ರ)

**ಮಿಷನ್ ರಸ್ತೆ , ಆಶ್ರಮಪಾರಾ, ಜಲಪಾಯಿಗುರಿ -735101 ಪಶ್ಚಿಮ ಬಂಗಾಳ**

Phone: **8902051967, 9434344492, 03561-228388/228945**, Email: **rkmajal@gmail.com** Website: **www.rkmjalpaiguri.in**

## ಒಂದು ವಿಜ್ಞಾಪನೆ

''ಯಾರು ಇತರರಿಗಾಗಿ ಬದುಕುವರೋ, ಅವರೇ ನಿಜವಾಗಿ ಬದುಕುವವರು''

— ಸ್ವಾಮಿ ವಿವೇಕಾನಂದ

ಸ್ನೇಹಿತರೇ ಹಾಗೂ ಭಕ್ತರೇ,

ಸ್ವಾಮಿ ವಿವೇಕಾನಂದರ ಕಹಳೆ ಧ್ವನಿಗೆ ಓಗೊಟ್ಟು 1928ರಲ್ಲಿ **ಜಲಪಾಯಿಗುರಿ** ಪಟ್ಟಣದಲ್ಲಿ ಕೆಲವು ಭಕ್ತರು ಒಂದು ಆಶ್ರಮವನ್ನು ಆರಂಭಿಸಿದರು. 1941ರಲ್ಲಿ ಅದು ಬೇಲೂರು ಮಠದ ರಾಮಕೃಷ್ಣ ಮಿಷನ್‌ನ ಶಾಖಾಕೇಂದ್ರವಾಗಿ ಸೇರ್ಪಡೆಗೊಂಡಿತು. ಹಿಮಾಲಯ ಪರ್ವತ ಶ್ರೇಣಿಯ ಕೆಳಗಿನ ಹಂತದ ತಪ್ಪಲು ಪ್ರದೇಶದಲ್ಲಿ ನೆಲೆಸಿರುವ ಈ ಆಶ್ರಮವು **ನಾಲ್ಕು ರಾಷ್ಟ್ರಗಳ ನಡುವಿನ ವಿಶಿಷ್ಟ ಭೂಪ್ರದೇಶದಲ್ಲಿ** ನೆಲೆಸಿದೆ. ಹಚ್ಚಹಸಿರಿನ ರಮಣೀಯ ನೈಸರ್ಗಿಕ ಸಮೃದ್ಧಿಯಿಂದ ಕೂಡಿದ ಈ ಆಶ್ರಮವು ಸಮೀಪದ ಹಾಗೂ ದೂರದ ಅನೇಕ ಮಂದಿ ಸಾಧಕರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ. ಸೇವಾ ಕಾರ್ಯಗಳಲ್ಲಿ ವಿದ್ಯಾರ್ಥಿ ಮಂದಿರ, ಮೌಲ್ಯ ಶಿಕ್ಷಕ ತರಬೇತಿ, ಏಕೀಕೃತ ಶಿಶು ಅಭಿವೃದ್ಧಿ ಯೋಜನೆ, ಉಚಿತ ಚಿಕಿತ್ಸಾಲಯ, ಗ್ರಂಥಾಲಯ ಹಾಗೂ ವಾಚನಾಲಯ, ಪರಿಹಾರ ಮತ್ತು ಅಭಿವೃದ್ಧಿ ಕಾರ್ಯಗಳು ಹಾಗೂ ಇನ್ನಿತರ ಯೋಜನೆಗಳು ಪ್ರಮುಖವಾಗಿವೆ.



ಸ್ವಾಮಿ ವಿವೇಕಾನಂದರು 1893ರ ಸೆಪ್ಟೆಂಬರ್ 11ರಂದು ಚಿಕಾಗೋದಲ್ಲಿ ನೀಡಿದ ನಿತ್ಯ ಸ್ಮರಣಾರ್ಹವೂ ಅತ್ಯಮೋಘವೂ ಆದ ಉಪನ್ಯಾಸಗಳು ನಡೆದ 'ಆರ್ಟ್ ಇನ್‌ಸ್ಟಿಟ್ಯೂಟ್'ಅನ್ನು ಹೋಲುವ '**ವಿವೇಕಾನಂದ ಸಭಾಗೃಹ**'ದ ನಿರ್ಮಾಣ ಮಾಡುವ ಯೋಜನೆಯನ್ನು ನಾವು ಹಾಕಿಕೊಂಡಿದ್ದೇವೆ. (ಅದರ ಮಾದರಿಯು ಚಿತ್ರದಲ್ಲಿದೆ.) ಈ ಬಹೂಪಯೋಗಿ ಕಟ್ಟಡವು 16,000 ಚದರಡಿ ಅಳತೆಯಷ್ಟು ವಿಶಾಲವಾಗಿದ್ದು, ಸುಮಾರು 1300 ಮಂದಿ ಕುಳಿತುಕೊಳ್ಳಬಹುದಾಗಿದೆ. ವಿದ್ಯಾರ್ಥಿಗಳಿಗೆ, ಯುವಕರಿಗೆ ಹಾಗೂ ಸಾರ್ವಜನಿಕರಿಗೆ ವಿಚಾರ ಸಂಕಿರಣ, ಸಭೆ-ಸಮಾರಂಭಗಳನ್ನು ಏರ್ಪಡಿಸಲು, ಮೌಲ್ಯಶಿಕ್ಷಣ ಸಾಂಸ್ಕೃತಿಕ ಆಧ್ಯಾತ್ಮಿಕ ಹಾಗೂ ಸೇವಾ ಕಾರ್ಯಗಳನ್ನು ನಡೆಸಲು ಮತ್ತು ವಿವಿಧ ಹಬ್ಬ-ಹರಿದಿನಗಳನ್ನು ಹಮ್ಮಿಕೊಳ್ಳಲು ಈ ಕಟ್ಟಡ ನೆರವಾಗಲಿದೆ. ವಿಸ್ತಾರ ಉತ್ತರ ಬಂಗಾಳದ ಹಲವು ಪ್ರದೇಶಗಳಿಂದ ಬರುವ ಅಪಾರ ಸಂಖ್ಯೆಯ ಭಕ್ತರುಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇದರಿಂದ ಸಾಧ್ಯವಾಗುತ್ತದೆ. ಈ ಮೂಲಕ ಸ್ವಾಮಿ ವಿವೇಕಾನಂದರ '**ಮಾನವ - ನಿರ್ಮಾಣ**' ಹಾಗೂ '**ರಾಷ್ಟ್ರ ನಿರ್ಮಾಣ**'ದ ಕನಸನ್ನು ಸಾಕಾರಗೊಳಿಸಲು ಸಾಧ್ಯವಾಗುವುದು ಎಂದು ನಮ್ಮ ನಂಬಿಕೆ. ಇದರ ನಿರ್ಮಾಣಕಾರ್ಯಕ್ಕೆ ಸುಮಾರು 4.66 ಕೋಟಿ ರೂ. ಅಂದಾಜು ವೆಚ್ಚ ತಗಲುವುದು. ಇದಕ್ಕೆ ತಾವು ಉದಾರ ಧನಸಹಾಯ ನೀಡಬೇಕೆಂದು ತಮ್ಮಲ್ಲಿ ನಾವು ವಿನಂತಿಸಿಕೊಳ್ಳುತ್ತಿದ್ದೇವೆ.

ದಾನಿಗಳಲ್ಲಿ ತಮ್ಮ ಪ್ರೀತಿಪಾತ್ರರಾದವರ ಸ್ಮರಣೆಗಾಗಿ ದತ್ತಿ ನೀಡಬಯಸುವವರಿದ್ದರೆ, ಅವರ ಬಯಕೆಯನ್ನು ಈಡೇರಿಸಲು, ಅವರ ಪ್ರೀತಿ ಪಾತ್ರರಾದವರ ಹೆಸರನ್ನು ಸೂಕ್ತ ಸ್ಥಳದಲ್ಲಿ ಫಲಕಗಳ ಮೂಲಕ ಹಾಕಿಸಲಾಗುವುದು. ಆಸಕ್ತ ದಾನಿಗಳು ಈ ಕುರಿತು ಆಶ್ರಮದ ಕಾರ್ಯದರ್ಶಿಯವರನ್ನು ಸಂಪರ್ಕಿಸಬಹುದು. ಅವರ ವಿಳಾಸ: **The Secretary, Ramakrishna Mission Ashrama, Ashramapara, Mission Road, Jalapaiguri - 735101, West Bengal, India.**

ದೇಣಿಗೆಗಳನ್ನು A/C Payee ಚೆಕ್, ಡ್ರಾಫ್ಟ್, ಮನಿ ಆರ್ಡರ್ ಮೂಲಕ ಕಳುಹಿಸಬಹುದು. ಅವುಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿ, ಸ್ವೀಕೃತಿ ಪತ್ರವನ್ನು ಕಳುಹಿಸುತ್ತೇವೆ. ಚೆಕ್, ಡ್ರಾಫ್ಟ್‌ಗಳನ್ನು ಕಳುಹಿಸಬೇಕಾದ ವಿಳಾಸ: **Ramakrishna Mission Ashrama, Jalapaiguri.**

**ಈ ಧನಸಹಾಯಗಳಿಗೆ 1961ರ ಆದಾಯ ತೆರಿಗೆ ಕಾಯಿದೆಯನ್ವಯ u/s 80-G ತೆರಿಗೆ ವಿನಾಯಿತಿ ಅನ್ವಯವಾಗುತ್ತದೆ.**

**Payment may be made by Bank Transfer**

*Bank Details:*
State Bank of India, Jalpaiguri Branch, Club Road, Jalpaiguri: 735101
Savings Bank A/C no. **11188188101**; IFSC Code: **SBINOOOOO95** MICR No: **735002095** Branch Code: **SBI Jalpaiguri**

**ಆನ್‌ಲೈನ್ ಮೂಲಕ ಹಣಪಾವತಿ:** ಆನ್‌ಲೈನ್ ಮೂಲಕ ಹಣವನ್ನು ವರ್ಗಾಯಿಸಿದ ತಕ್ಷಣವೇ rkmajal@gmail.com ಈ ವಿಳಾಸಕ್ಕೆ ತಮ್ಮ ಹೆಸರು, ಪೂರ್ಣ ಅಂಚೆ ವಿಳಾಸ, PAN No. ಹಾಗೂ ವರ್ಗಾಯಿಸಿದ ಮೊತ್ತ - ಈ ವಿವರಗಳನ್ನು ನಮಗೆ ತಿಳಿಸಲು ಕೋರುತ್ತೇವೆ.

ಈ ಉದಾತ್ತ ಯೋಜನೆಗಾಗಿ ನೀವು ಮಾಡುವ ಧನಸಹಾಯವು ದೂರಗಾಮಿಯೂ, ನಿರ್ಮಾಣಕಾರ್ಯ ಪೂರ್ಣಗೊಳ್ಳುವ ತನಕ ಸಹಕಾರಿಯೂ ಆಗಿರುವುದರಲ್ಲಿ ಯಾವುದೇ ಸಂದೇಹವಿಲ್ಲ.

ಶ್ರೀರಾಮಕೃಷ್ಣರು ನಿಮ್ಮ ಮೇಲೆ ಸದಾ ಕೃಪೆದೋರಿ ಹರಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಜಲಪಾಯಿಗುರಿ
ಡಿಸೆಂಬರ್ ೯, ೨೦೧೭

ಇತಿ ಭಗವತ್ಸೇವೆಯಲ್ಲಿ ತಮ್ಮ
ಸ್ವಾಮಿ ಶಿವಪ್ರೇಮಾನಂದ
ಕಾರ್ಯದರ್ಶಿಗಳು

# ರಾಮಕೃಷ್ಣ ಮಠ, ಏಳಗಿರಿ

(ರಾಮಕೃಷ್ಣ ಮಠ, ಬೇಲೂರು ಮಠ, ಪಶ್ಚಿಮ ಬಂಗಾಳ ಇದರ ಒಂದು ಶಾಖಾಕೇಂದ್ರ)
ಅಂಚೆ : **ಅತನಾವೂರು**, (via) **ಜೋಲಾರ್‌ಪೇಟೆ, ಏಳಗಿರಿ ಬೆಟ್ಟ, ವೆಲ್ಲೂರು ಜಿಲ್ಲೆ,**
**ತಮಿಳುನಾಡು – 635853** ಮೊಬೈಲ್ ನಂ.: **9113815749**

## ರಾಮಕೃಷ್ಣ ಮಹಾಸಂಘದ ಎಲ್ಲ ಹಿತೈಷಿಗಳಲ್ಲಿ ಒಂದು ಮನವಿ

ಮಾನ್ಯರೇ,

ನಮಸ್ಕಾರ ಹಾಗೂ ಶುಭಾಶಯಗಳು.

**ಏಳಗಿರಿ ಕೇಂದ್ರ**ವು ಈವರೆಗೆ ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದ ಶಾಖಾಕೇಂದ್ರವಾಗಿರುವ **ನಟ್ಟರಾಂಪಳ್ಳಿ ಕೇಂದ್ರ**ದ ಉಪಶಾಖೆಯಾಗಿತ್ತು. ಈಗ ಇದು ಸ್ವತಂತ್ರ ಶಾಖಾಕೇಂದ್ರವಾಗಿ ಕಾರ್ಯನಿರ್ವಹಿಸಲು ಬೇಲೂರು ಮಠದ ಆಡಳಿತ ಮಂಡಳಿಯು ನಿರ್ಧರಿಸಿದೆ. ಈ ಮೂಲಕ ಸ್ಥಳೀಯ ಜನತೆಗೆ ಸೇವೆ ಸಲ್ಲಿಸುವ ಅವಕಾಶ ನಮಗೆ ಲಭಿಸಿದೆ ಎಂದು ತಿಳಿಸಲು ಹರ್ಷಿಸುತ್ತೇವೆ.

ಈ ಕೇಂದ್ರದಲ್ಲಿ ಈಗಾಗಲೇ ಇರುವ ಎರಡು ಕಟ್ಟಡಗಳ ಸಮಗ್ರ ದುರಸ್ತಿಕಾರ್ಯ ತುರ್ತಾಗಿ ನಡೆಯಬೇಕಾಗಿದೆ. ಇದರೊಂದಿಗೆ ಮಠದ ಆವರಣ ಗೋಡೆಯ ನಿರ್ಮಾಣಕಾರ್ಯ ಹಾಗೂ ಸ್ಥಳೀಯ ಬಡ ಮಕ್ಕಳಿಗಾಗಿ ಅನೌಪಚಾರಿಕ ಶಿಕ್ಷಣವನ್ನು ಆರಂಭಿಸುವ ಯೋಜನೆಯನ್ನು ಕೂಡ ನಾವು ಹಮ್ಮಿಕೊಂಡಿದ್ದೇವೆ. ಸುತ್ತಮುತ್ತ ಸಾಕಷ್ಟು ವೈದ್ಯಕೀಯ ಸವಲತ್ತು ಲಭ್ಯವಿಲ್ಲದ್ದರಿಂದ ಈ ದಿಕ್ಕಿನಲ್ಲೂ ನಾವು ಅಗತ್ಯವಾದ ಕೆಲಸಗಳನ್ನು ಆರಂಭಿಸಬೇಕಾಗಿದೆ. ಒಂದು ಸಂಚಾರಿ ಆಸ್ಪತ್ರೆಯನ್ನೂ ಆರಂಭಿಸಲಾಗುವುದು.

ಸದ್ಯದ ಪರಿಸ್ಥಿತಿಯಲ್ಲಿ ಇಲ್ಲಿ ಕೇವಲ 7 ಎಕರೆ ಜಮೀನು ಹಾಗೂ ಎರಡು ಹಳೆಯ ಕಟ್ಟಡಗಳಷ್ಟೇ ಇವೆ. ಮೇಲೆ ಹೇಳಿದ ನಿರ್ಮಾಣಕಾರ್ಯಗಳನ್ನು ಕೈಗೊಳ್ಳಲು ಅನೇಕ ಕೋಟಿ ಆರ್ಥಿಕ ವೆಚ್ಚದ ಆವಶ್ಯಕತೆಯಿದೆ. ಈ ಹಿನ್ನೆಲೆಯಲ್ಲಿ ಎಲ್ಲ ಹಿತೈಷಿಗಳಲ್ಲಿ, ಭಕ್ತರಲ್ಲಿ ಹಾಗೂ ಸಮಾಜ ಸೇವಾಸಕ್ತರಲ್ಲಿ ಈ ಮಹತ್ಕಾರ್ಯಕ್ಕಾಗಿ ಉದಾರ ಆರ್ಥಿಕ ನೆರವು ನೀಡಬೇಕೆಂದು ನಾವು ಅತ್ಯಂತ ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

ಡಿ.ಡಿ./ಚೆಕ್‌ಗಳನ್ನು **Ramakrishna Math, Yelagiri** ಎಂಬ ಹೆಸರಿನಲ್ಲಿ ತೆಗೆದು ನಮ್ಮ ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ: Ramakrishna Math, Yelagiri, P.O. Athanavur, via Jolarpet, Yelagiri Hills, Dt.Vellore, Tamil Nadu. Pin: 635 853 Mobile No. 9113815749

ಆನ್‌ಲೈನ್ ಪಾವತಿ ಮಾಡುವವರಿಗೆ SBI ಬ್ಯಾಂಕ್ ವಿವರಗಳು ಹೀಗಿವೆ:

Current A/c.No.: **37680966203**
Bank Name and Branch: **SBI, Nattarampalli Branch**
IFSC Code: **SBIN0014619** PAN No.: **AAATR3497G**

ಆನ್‌ಲೈನ್ ಪಾವತಿ ಮಾಡಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಫೋನ್ ನಂ. ಇತ್ಯಾದಿಗಳನ್ನು ಈ ವಿಳಾಸಕ್ಕೆ ಇ-ಮೇಲ್ ಮೂಲಕ ತಿಳಿಸಬೇಕು: yelagiri@rkmm.org. ಈ ದೇಣಿಗೆಗಳಿಗೆ 80G ಆದಾಯ ತೆರಿಗೆ ಕಾಯಿದೆಯ ಅನ್ವಯ ರಿಯಾಯಿತಿ ಇರುತ್ತದೆ.

ವಂದನೆಗಳೊಂದಿಗೆ,
ಶ್ರೀರಾಮಕೃಷ್ಣರಲ್ಲಿ ತಮ್ಮ
**ಸ್ವಾಮಿ ಭಾವರೂಪಾನಂದ**
ಅಧ್ಯಕ್ಷರು



ಸಂಪಾದಕೀಯ

# ದೇವರಿದ್ದಾನೆಯೆ?

'ದೇವರಿದ್ದಾನೆಯೆ?' — ಈ ಪ್ರಶ್ನೆ ಇಂದು ನಿನ್ನೆಯದಲ್ಲ. ಅನಾದಿಕಾಲದಿಂದಲೂ ಹಲವರ ಮನದಲ್ಲಿ ಸುಳಿದಾಡಿ, ಸಂದೇಹವಾಗಿ ಕಾಡಿ, ಏನೇನು ಮಾಡಿದರೂ ಬಗೆಹರಿಯದ ಒಗಟಾಗಿ ನಿಂತಿದೆ. ಈ ಕುರಿತು ನಡೆದ ಚರ್ಚೆ, ಗೊಂದಲ, ವಿಶ್ಲೇಷಣೆ, ಅನ್ವೇಷಣೆಗಳಿಗೆ ಕೊನೆಯಿಲ್ಲ. ಈಗಿನ ಯುವಕ, ಯುವತಿಯರಿಗೆ ಸಹಜವಾಗಿ ಮೂಡುವ ಪ್ರಶ್ನೆ ಹೀಗೆ: 'ಇಷ್ಟೆಲ್ಲ ವಿಜ್ಞಾನ, ತಂತ್ರಜ್ಞಾನ ಮುಂದುವರಿದಿದೆ. ಜಗತ್ತು ಆಧುನಿಕವಾಗಿದೆ. ಹಳೆಯ ವಿಚಾರಗಳೆಲ್ಲ ಬುಡಮೇಲಾಗಿವೆ. ಆದರೂ ಈ ಧರ್ಮ, ಅಧ್ಯಾತ್ಮಗಳ ಗೀಳು ನಮ್ಮ ದೇಶವನ್ನೇಕೆ ಬಿಟ್ಟು ಹೋಗುತ್ತಿಲ್ಲ? ಹೊಸ ಹೊಸ ಬಗೆಗಳಲ್ಲಿ , ಅನೇಕ ಮಠ, ಮಂದಿರ, ಆಶ್ರಮಗಳಲ್ಲಿ ಧಾರ್ಮಿಕ ಚಟುವಟಿಕೆಗಳು ಅದೇಕೆ ಇನ್ನಷ್ಟು ಹೆಚ್ಚಾಗುತ್ತಿವೆ?'

ಉತ್ತರ ಸ್ಪಷ್ಟವಾಗಿದೆ. ದೇವರನ್ನು ಕುರಿತಾದ ಪ್ರಶ್ನೆ ಬದುಕಿನಲ್ಲೇ ಮೂಲಭೂತವಾದದ್ದು. ಮಾನವನಿಗೆ ಜೀವಿಸಲು ಅಗತ್ಯವಾದ ಪ್ರಾಥಮಿಕ ಆವಶ್ಯಕತೆಗಳಾದ ಅನ್ನ, ಬಟ್ಟೆಬರೆ, ವಸತಿ, ವಿದ್ಯಾಭ್ಯಾಸ ಇವುಗಳ ನಂತರ 'ಮುಂದೇನು?' ಎಂಬ ಪ್ರಶ್ನೆ ಒಂದಲ್ಲ ಒಂದು ಹಂತದಲ್ಲಿ ಮೂಡಲೇಬೇಕಾಗುತ್ತದೆ. ಮೇಲೆ ಹೇಳಿದ ಅಗತ್ಯಗಳೆಲ್ಲ ಪೂರೈಸಿದ ಬಳಿಕ ಮಾನವನ ಮನಸ್ಸು ಬೌದ್ಧಿಕ ಹಂತಕ್ಕೇರುತ್ತದೆ; ಜಗತ್ತಿನ, ಜೀವನದ ಹಾಗೂ ತನ್ನ ಕುರಿತ ಜಿಜ್ಞಾಸೆ ಬೆಳೆಯುತ್ತದೆ. ಪ್ರಪಂಚದಲ್ಲಿ ಅನೇಕ ಗೊಂದಲಗಳಿವೆ. ಬಗೆಹರಿಯದ ಸಮಸ್ಯೆಗಳಿವೆ. ಅದೇ ರೀತಿ, ಸದಾ ಕಾಡುವ ನಿಗೂಢ ಸಂಗತಿಗಳಿವೆ: ಕಾಲ, ಮೃತ್ಯು, ವಿಧಿ, ಕರ್ಮ ಇತ್ಯಾದಿ. ಇವುಗಳನ್ನು ಕುರಿತ ಬೌದ್ಧಿಕ ಅನ್ವೇಷಣೆ, ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಿಕೆ ಹಲವು ಯುಗಗಳಲ್ಲಿ ಮುಂದುವರಿಯಿತು. ಇವುಗಳ ಫಲವಾಗಿ ಮಾನವನು ಕಂಡುಕೊಂಡ ಸತ್ಯವೇ ಧರ್ಮ, ಅಧ್ಯಾತ್ಮ. 'ಕಂಡುಕೊಂಡ' ಎಂಬುದು ಮುಖ್ಯ. ನಮ್ಮ ದೇಶದಲ್ಲಿ ಯಾರೋ ಒಬ್ಬ ವ್ಯಕ್ತಿ ಇದನ್ನು ಕಾಣಲಿಲ್ಲ ಅಥವಾ ಸ್ಥಾಪಿಸಲಿಲ್ಲ ; ಒಂದು ದೊಡ್ಡ ಪರಂಪರೆ ಈ ಸತ್ಯವನ್ನು ಕಂಡುಕೊಂಡಿತು; ಆ ಸತ್ಯದ ಆಧಾರದ ಮೇಲೆ ಧಾರ್ಮಿಕ, ಆಧ್ಯಾತ್ಮಿಕ ತತ್ತ್ವಗಳನ್ನು ರೂಪಿಸಿತು. ಈ ಪರಂಪರೆಯಲ್ಲಿ ಹಲವರು ಬರುತ್ತಾರೆ. ಅವರನ್ನು ಋಷಿ, ಮುನಿ, ಯೋಗಿ, ಅವತಾರ, ಸಂತ, ಆಚಾರ್ಯ ಎಂದೆಲ್ಲ ಕರೆಯಲಾಗುತ್ತದೆ. ಅವರು ಕಂಡ ಸತ್ಯವನ್ನೇ ದೇವರು, ಭಗವಂತ, ಆತ್ಮ, ಬ್ರಹ್ಮ ಎಂದೆಲ್ಲ ಕರೆದರು. ಇದನ್ನು ಕಂಡುಕೊಂಡ ಮಹಾತ್ಮರು ಸಾಧಕರು; ಸತ್ಯದರ್ಶನಕ್ಕಾಗಿ ತಮ್ಮ ಸರ್ವಸ್ವವನ್ನೂ ತ್ಯಜಿಸಿದವರು. ತಪಸ್ಸು, ಯೋಗ, ಧ್ಯಾನ, ವಿಚಾರಗಳ ಮೂಲಕ ಪರಮಸತ್ಯವನ್ನು ಕಂಡರು. ಒಬ್ಬೊಬ್ಬ ಕಂಡ ಸತ್ಯವೂ ಒಂದೊಂದು ಬಗೆ. ಭಗವಂತ ಅವರಿಗೆ ನಿರ್ಗುಣವಾಗಿ, ಸಗುಣವಾಗಿ, ಸಾಕಾರನಾಗಿ ಅಥವಾ ನಿರಾಕಾರವಾಗಿ ಕಾಣಿಸಿಕೊಂಡ. ವ್ಯಕ್ತಿರೂಪದಲ್ಲಿ ಧರೆಗೆ ಅವತರಿಸಿ ಬಂದ ದೇವತೆಗಳ ಮೂಲಕ ಹಲವು ಬಾರಿ ಧರ್ಮದ ಪುನರುತ್ಥಾನ, ಆಧ್ಯಾತ್ಮಿಕ ಜಾಗೃತಿ ನಮ್ಮಲ್ಲಿ ನಡೆಯಿತು. ದೇವರು ಇದ್ದಾನೆ, ಅವನನ್ನು ಕಾಣಬಹುದು, ಅದೊಂದೇ ಎಲ್ಲದರ ಹಿಂದಿರುವ ಸತ್ಯ; ಭಗವದ್ದರ್ಶನದಿಂದ ಮಾತ್ರ ಎಲ್ಲ ದುಃಖದುಮ್ಮಾನಗಳು ಕೊನೆಗೊಳ್ಳುವವು; ಕೊನೆಯಿಲ್ಲದ ಜನನ-ಮರಣಗಳಿಂದ ಬಿಡುಗಡೆ ಹೊಂದಬಹುದು — ಈ ನಂಬಿಕೆ ಭಾರತದಲ್ಲಿ ಸ್ಥಿರಗೊಂಡಿತು. ಭವಸಾಗರ ಅಥವಾ ಜನ್ಮ ಜನ್ಮಾಂತರಗಳ ಮೂಲಕ ಪಯಣಿಸುತ್ತ ಸುಖ-ದುಃಖಗಳ ಸರಪಳಿಯಲ್ಲಿ ಬಂಧಿತನಾಗುವ ಮಾನವನಿಗೆ ಅದರಿಂದ ಮುಕ್ತಿ ದೊರಕುವುದರಿಂದ ಶಾಶ್ವತವಾದ ಆನಂದ, ಶಾಂತಿ ಲಭಿಸುವುದು; ಭಗವಂತನ ಕೃಪೆ, ಸಾನ್ನಿಧ್ಯ ಹಾಗೂ ಅವನಲ್ಲೇ ಒಂದಾಗುವ ಮಹಾಭಾಗ್ಯ ಒದಗಿ ಬರುವುದು. ಈ ರೀತಿಯಲ್ಲಿ ಹಲವು ಸಹಸ್ರ ವರ್ಷಗಳಿಂದ ರೂಪುಗೊಂಡ ಹಿಂದೂ ಧಾರ್ಮಿಕ ನಂಬಿಕೆ ಅಷ್ಟು ಸುಲಭವಾಗಿ ಬಿದ್ದು ಹೋಗಲಾರದು. ಧರ್ಮ, ತತ್ತ್ವ, ಸಂಸ್ಕೃತಿ, ಅಧ್ಯಾತ್ಮ – ಇವು ನಾಲ್ಕೂ ನಮ್ಮಲ್ಲಿ ಗಾಢವಾಗಿ ಬೆಸೆದುಕೊಂಡಿವೆ. ಐತಿಹಾಸಿಕವಾಗಿ ಭಾರತದ ಮೇಲೆ ನಡೆದ ಹಲವು ಬಗೆಯ ರಾಜಕೀಯ, ಸಾಂಸ್ಕೃತಿಕ ಆಕ್ರಮಣಗಳನ್ನು ಅವು ಮೆಟ್ಟಿ ನಿಂತಿದೆ. ಹೀಗಾಗಿ ಜಗತ್ತು ಆಧುನಿಕವಾದಷ್ಟೂ ನಮ್ಮಲ್ಲಿ ಧಾರ್ಮಿಕ ಪ್ರವೃತ್ತಿ, ಆಧ್ಯಾತ್ಮಿಕ ಚಟುವಟಿಕೆಗಳು ಇನ್ನಷ್ಟು ಜಾಗೃತವಾಗುತ್ತಿರುವುದು ಸಹಜ.

## ವಿರುದ್ಧ ಗತಿಯ ಪ್ರವಾಹ

ಇದಕ್ಕಿಂತ ಭಿನ್ನವಾಗಿ ಯೋಚಿಸುವ, ದೇವರ ಅಸ್ತಿತ್ವವನ್ನು ಒಪ್ಪದ, ಆಧ್ಯಾತ್ಮಿಕತೆಯನ್ನು ಪ್ರಶ್ನಿಸುವ ಮನೋಭಾವವೂ ಅತ್ಯಂತ ಪ್ರಾಚೀನ. 'ಅಂತಿಮವಾಗಿ ಎಲ್ಲವೂ ವೈಯಕ್ತಿಕ ಅನುಭವದ ಮೇಲೆ ನಿಂತಿದೆ. ದೇವರು, ಮುಕ್ತಿ, ಆತ್ಮ — ಇವೆಲ್ಲ ಕೆಲವು ಬುದ್ಧಿವಂತರ ಕಲ್ಪನೆಗಳು ಮಾತ್ರವಲ್ಲವೆ? ತಮ್ಮ ಅನಿಸಿಕೆ, ಕಲ್ಪನೆ, ಭಾವನೆಗಳನ್ನೇ ಸತ್ಯವೆಂದು ಅವರು ಸಾರಿದರೆ, ಅದನ್ನು ಉಳಿದವರೇಕೆ ನಂಬಬೇಕು? ಅಲ್ಪಬುದ್ಧಿಯವರು ಪ್ರಶ್ನಿಸುವುದಿಲ್ಲ. ಅವರು ಬೇಕಾದರೆ ಈ ರೀತಿಯ ಧಾರ್ಮಿಕರ ಹಿಂದೆ ಹೋಗಲಿ. ಆದರೆ ಬುದ್ಧಿಯುಳ್ಳವರು, ವಿಚಾರ ಮಾಡುವ ಸಾಮರ್ಥ್ಯವುಳ್ಳವರು, ಸ್ವಂತಿಕೆಯಿರುವವರು ಅದನ್ನೆಲ್ಲ ಏಕೆ ಒಪ್ಪಬೇಕು? ಸ್ವತಃ ನಮಗೆ ಆ ಸತ್ಯ ಕಂಡಿಲ್ಲ. ಆದ್ದರಿಂದ ಅದನ್ನು ನಾವು ಒಪ್ಪಲಾರೆವು. ಪ್ರತ್ಯಕ್ಷವಾಗಿ ಕಾಣುವ ಜಗತ್ತೇ ಸತ್ಯ; ಅದರಾಚೆಗೆ ಇನ್ನೇನೂ ಇಲ್ಲ. ಈ ಪ್ರಪಂಚದಲ್ಲಿ ಇರುವಷ್ಟು ಕಾಲ ಸುಖವಾಗಿ, ಆನಂದದಿಂದ ಜೀವನ ನಡೆಸಬೇಕು, ಅಷ್ಟೆ.' ಈ ರೀತಿ ವಾದಿಸುವವರ ಒಂದು ಪಂಗಡ ಬೆಳೆಯಿತು. ಅವರನ್ನು ಚಾರ್ವಾಕರು, ಲೋಕಾಯತರು, ನಾಸ್ತಿಕರು ಎಂದೆಲ್ಲ ಕರೆದರು. ಪ್ರಪಂಚದಲ್ಲಿ ಪ್ರತಿಯೊಂದು ಕಾಲಘಟ್ಟದಲ್ಲೂ ಈ ರೀತಿ ವಾದಿಸುವವರು ಕಂಡುಬರುತ್ತಾರೆ; ಈಗಿನ ವರ್ತಮಾನ ಕಾಲದಲ್ಲೂ ಇದ್ದಾರೆ. ಆದರೆ ಅನುಭವದ ಆಧಾರದಲ್ಲಿ, ಆತ್ಮಸಾಕ್ಷಾತ್ಕಾರದಲ್ಲಿ ನಿಂತ ಆಧ್ಯಾತ್ಮಿಕತೆ ಅದಕ್ಕೆಲ್ಲ ಉತ್ತರ ನೀಡುತ್ತದೆ. ನಮ್ಮ ದೇಶದಲ್ಲಿ ವಿವಿಧ ಯುಗಗಳಲ್ಲಿ ಆಗಿ ಹೋದ ಅನೇಕ ಮಂದಿ ಸಾಧು, ಸಂತರು, ಹಾಗೂ ಅವತಾರ ಪುರುಷರು ಮಾಡಿದ ಮಹತ್ಕಾರ್ಯಗಳಲ್ಲಿ ಒಂದು, ಇಂಥ ನಾಸ್ತಿಕ ವಾದಗಳಿಂದ ನಮ್ಮ ಸಮಾಜ ಹಾಗೂ ಸಂಸ್ಕೃತಿಯನ್ನು ರಕ್ಷಿಸಿರುವುದು. ಇತರ ದೇಶಗಳಿಗೆ ಹಾಗೂ ಸಂಸ್ಕೃತಿಗಳಿಗೆ ಹೋಲಿಸಿದರೆ ಭಾರತದಲ್ಲಿ ದೇವರನ್ನು ನಂಬುವವರ ಸಂಖ್ಯೆ ಅತ್ಯಧಿಕ. ಯಾರು ಬೇಕಾದರೂ ಅನುಸರಿಸಬಹುದಾದ ಧಾರ್ಮಿಕ ಸ್ವಾತಂತ್ರ್ಯ, ಆಧ್ಯಾತ್ಮಿಕ ಸಾಧನೆಯ ಮಾರ್ಗಗಳ ವೈವಿಧ್ಯ ಹಾಗೂ ಜನಸಾಮಾನ್ಯರಿಗೆ ಅನುಸರಿಸಲು ಯೋಗ್ಯವಾದ ಆಚರಣೆಗಳು — ಇವು ನಮ್ಮ ಧಾರ್ಮಿಕ-ಆಧ್ಯಾತ್ಮಿಕ ಸಂಸ್ಕೃತಿಯನ್ನು ಜೀವಂತವಾಗಿ ಹಿಡಿದಿಟ್ಟಿವೆ.

## ಎಲ್ಲ ವೈವಿಧ್ಯತೆಗಳ ಹಿಂದೆ

ದೇವರ ಅಸ್ತಿತ್ವವನ್ನು ಕುರಿತು ಸಂದೇಹಪಡುವವರಿಗೆ ಬಗೆಹರಿಯದ ಒಂದು ಸಮಸ್ಯೆಯೆಂದರೆ, ನಮ್ಮಲ್ಲಿ ಕಂಡುಬರುವ ವೈವಿಧ್ಯತೆ. ಮೂವತ್ತಮೂರು ಕೋಟಿ ದೇವದೇವತೆಗಳು; ಬೀದಿ ಬೀದಿಯಲ್ಲೂ ಒಂದೊಂದು ದೇವರ ಗುಡಿ; ಮನೆಮನೆಗೂ ಒಂದೊಂದು ಕುಲದೇವತೆ; ಒಂದೊಂದು ಪಂಗಡಕ್ಕೂ ಬೇರೆ ಬೇರೆ ತತ್ತ್ವ; ಇವೆಲ್ಲದರ ನಡುವೆ ಯಾವುದನ್ನು ನಂಬಬೇಕು, ಯಾವುದನ್ನು ಬಿಡಬೇಕು? ಯಾವ ದೇವರನ್ನು ಪೂಜಿಸಿದರೆ ಬಯಸಿದ್ದು ಈಡೇರುವುದು? ಜನರ ಸ್ಥಿತಿಗತಿ, ಬಡತನ-ಸಿರಿತನ, ಅಂತಸ್ತು, ತಿಳುವಳಿಕೆ — ಇವುಗಳಿಗೆ ತಕ್ಕಂತೆ ಅವರು ಪೂಜಿಸುವ ದೇವತೆಗಳಲ್ಲೂ ಹಲವಾರು ಬಗೆಗಳಿವೆ. ಇವನ್ನೆಲ್ಲ ಕಂಡು ಜೀರ್ಣಿಸಿಕೊಳ್ಳಲಾಗದ ಮಂದಿ, 'ಇವೆಲ್ಲ ಗೊಡ್ಡು ಆಚರಣೆ, ಬರೀ ಮೂಢ ನಂಬಿಕೆ' ಎಂದು ಜರೆಯುವುದುಂಟು. ಅಂಥ ಮನೋಭಾವದವರಿಗೆ ಶ್ರೀರಾಮಕೃಷ್ಣರು ಹೇಳಿದ ಒಂದು ಕಥೆ ಯೋಗ್ಯ ಉತ್ತರ ನೀಡುವುದು:

''ಒಂದು ಕತೆ ಕೇಳು. ಒಮ್ಮೆ ಒಬ್ಬ ಒಂದು ತೋಪಿನ ಕಡೆ ಹೋಗಿದ್ದ. ಅಲ್ಲಿ ಒಂದು ಮರದ ಮೇಲೆ ಒಂದು ಪ್ರಾಣಿ ಕಾಣಿಸಿಕೊಂಡಿತು. ಆತ ಬಂದು ಇನ್ನೊಬ್ಬನಿಗೆ ಹೇಳಿದ: 'ನೋಡು, ಆ ಮರದ ಮೇಲೆ ಒಂದು ಕೆಂಪು ಬಣ್ಣದ ಪ್ರಾಣಿಯನ್ನು ನೋಡಿ ಬಂದೆ.' ಅವನು ಹೇಳಿದ: 'ನಾನು ಅಲ್ಲಿ ಹೋಗಿದ್ದಾಗ, ನಾನೂ ಅದನ್ನು ನೋಡಿ ಬಂದಿದ್ದೇನೆ; ಅದು ಕೆಂಪು ಏಕಾದೀತು? ಹಸುರು,' ಅವರ ಹತ್ತಿರ ನಿಂತಿದ್ದ ಮತ್ತೊಬ್ಬ ಹೇಳಿದ: 'ಇಲ್ಲ ಇಲ್ಲ , ಅದನ್ನು ನಾನೂ ನೋಡಿದ್ದೇನೆ. ಅದರ ಬಣ್ಣ ಹಳದಿ.' ಹೀಗೆ ಅಲ್ಲಿ ನಿಂತಿದ್ದವರು ಅದರ ಬಣ್ಣ ಬೂದು, ನೇರಳೆ ಹಣ್ಣಿನ ಬಣ್ಣ , ನೀಲಿ ಇತ್ಯಾದಿಯಾಗಿ ಹೇಳಲಾರಂಭಿಸಿದರು. ಕೊನೆಗೆ ಒಬ್ಬರಿಗೊಬ್ಬರಿಗೆ ಜಗಳ ಹತ್ತಿಕೊಂಡು ಬಿಟ್ಟಿತು. ಇದರ ಸಂಬಂಧವಾಗಿ ಒಂದು ಇತ್ಯರ್ಥಕ್ಕೆ ಬರಲು ಎಲ್ಲರೂ ಆ ಮರದ ಹತ್ತಿರಕ್ಕೆ ಹೋದರು. ಒಬ್ಬ ಮನುಷ್ಯ ಆ ಮರದ ಕೆಳಗೆ ಕುಳಿತುಕೊಂಡಿದ್ದುದು ಅವರ ಕಣ್ಣಿಗೆ ಬಿತ್ತು. ಆತನನ್ನು ಆ ಪ್ರಾಣಿಯ ಬಣ್ಣದ ಸಂಬಂಧವಾಗಿ ಕೇಳಲಾಗಿ ಆತ ಹೇಳಿದ: 'ನಾನು ಈ ಮರದ ಕೆಳಗೇ ವಾಸಿಸುತ್ತಿದ್ದೇನೆ. ಆ ಪ್ರಾಣಿಯ ಸ್ವರೂಪ ನನಗೆ ಬಹಳ ಚೆನ್ನಾಗಿ ಗೊತ್ತಿದೆ. ನೀವು ಪ್ರತಿಯೊಬ್ಬರು ಹೇಳುತ್ತಿರುವುದೂ ಸತ್ಯವೆ. ಕೆಲವು ವೇಳೆ ಅದು ಕೆಂಪಾಗಿ, ಇನ್ನು ಕೆಲವು ವೇಳೆ ಹಸುರಾಗಿ, ಮತ್ತೆ ಕೆಲವು ವೇಳೆ ಹಳದಿಯಾಗಿ, ಮತ್ತೂ ಕೆಲವು ವೇಳೆ ನೀಲಿಯಾಗಿ, ಹೀಗೇ ಇನ್ನೂ ಏನೇನೋ ಬಣ್ಣಗಳಾಗಿ ಕಾಣಿಸಿಕೊಳ್ಳುತ್ತದೆ. ಅದಕ್ಕೆ ಗೋಸುಂಬೆ ಅಂತ ಹೆಸರು. ಒಂದೊಂದು ವೇಳೆ ಅದಕ್ಕೆ ಯಾವ ಬಣ್ಣವೂ ಇರುವುದೇ ಇಲ್ಲ. ಕೆಲವು ವೇಳೆ ಅದು ಸಗುಣ, ಇನ್ನು ಕೆಲವು ವೇಳೆ ನಿರ್ಗುಣ.'

''ಇದೇ ರೀತಿ ಯಾರು ಸರ್ವದಾ ಭಗವಚ್ಚಿಂತನೆ ಮಾಡುತ್ತಾ ಇರುತ್ತಾರೋ ಆತನಿಗೆ ಗೊತ್ತಾಗುತ್ತದೆ ಆತನ ನಿಜಸ್ವರೂಪ ಏನು ಎಂಬುದು. ಆತನಿಗೆ ಮಾತ್ರವೇ ಕೇವಲ ಗೊತ್ತಿರುತ್ತದೆ, ಭಗವಂತ ನಾನಾ ರೂಪಗಳಿಂದ, ನಾನಾ ಭಾವಗಳಿಂದ ಕಾಣಿಸಿಕೊಳ್ಳುತ್ತಾನೆ - ಆತ ಸಗುಣನೂ ಹೌದು, ನಿರ್ಗುಣನೂ ಹೌದು ಎಂಬುದು. ಕೇವಲ ಆ ಮರದ ಕೆಳಗೆ ವಾಸಿಸುತ್ತಿರುವವನಿಗೆ ಮಾತ್ರ ಗೊತ್ತಿರುತ್ತದೆ, ಗೋಸುಂಬೆ ವಿವಿಧ ಬಣ್ಣಗಳನ್ನು ಧರಿಸುತ್ತದೆ ಮತ್ತು ಕೆಲವು ವೇಳೆ ಅದಕ್ಕೆ ಯಾವ ಬಣ್ಣವೂ ಇರದು ಎಂಬುದು. ಉಳಿದವರು ಬರಿದೆ ವಾದ-ವಿವಾದ, ಜಗಳ-ಬವರ ಇವುಗಳಲ್ಲಿ ತೊಡಗಿ ಸತ್ತು ಸುಣ್ಣವಾಗಿ ಹೋಗುತ್ತಾರೆ.'' *('ಶ್ರೀರಾಮಕೃಷ್ಣ ವಚನವೇದ', ಸಂಪುಟ ೧, ಪು. ೬೨)*

ವಿವಿಧ ದೇವತಾಮೂರ್ತಿಗಳ, ವಿವಿಧ ತತ್ತ್ವ - ಆಚರಣೆಗಳ ಹಾಗೂ ವಿವಿಧ ಸಂಪ್ರದಾಯಗಳ ಹಿಂದೆ ಒಂದು ಏಕತೆಯ ಸ್ರೋತ ಅನಾದಿಕಾಲದಿಂದಲೂ ನಮ್ಮಲ್ಲಿ ಹರಿಯುತ್ತಿದೆ. ಇದನ್ನು **'ಸನಾತನ ಧರ್ಮ'** ಎಂದು ನಾವು ಕರೆಯುತ್ತೇವೆ. ವೇದ, ವೇದಾಂತಗಳೇ ಹೇಳುವಂತೆ, ಯಾವುದು ಪರಬ್ರಹ್ಮನನ್ನು ಕಾಣಿಸುವಂತೆ ಮಾಡಬಲ್ಲದೋ ಅದುವೇ ನಿಜವಾದ ವಿದ್ಯೆ; 'ಪರಾವಿದ್ಯೆ'. ಅದೇ ಧರ್ಮ, ಅಧ್ಯಾತ್ಮದ ಸಾರ. ವೇದಗಳೆಲ್ಲ ಸಾರುವ ಧರ್ಮ,

ತತ್ತ್ವ ಈ ವಿದ್ಯೆಯೇ ಆಗಿದೆ. ಅದು ಅನಾದಿ, ಅನಂತ; ಅದಕ್ಕೆ ಅಳಿವಿಲ್ಲ. ಆದ್ದರಿಂದಲೇ ಅದನ್ನು ಶಾಶ್ವತ ಸತ್ಯವೆಂದೂ, ಅದನ್ನು ಆಧರಿಸಿದ ಪರಂಪರೆಯನ್ನು **ಸನಾತನ ಧರ್ಮ** ವೆಂದೂ ಕರೆಯಲಾಗಿದೆ. ಈ ಕಾರಣದಿಂದಲೇ ನಮ್ಮಲ್ಲಿ ವೇದಗಳ ಮಾತೇ ಅಂತಿಮ; ಅವುಗಳಲ್ಲಿ ಹೇಳಿರುವ ತತ್ತ್ವವೇ ಪರಮಸತ್ಯ. ಈ ತತ್ತ್ವ ಹೇಳುವುದೇನು? ಎಲ್ಲ ವೈವಿಧ್ಯತೆಗಳ ಹಿಂದಿರುವ ಏಕತೆಯನ್ನು ಅದು ತೋರಿಸಿಕೊಡುತ್ತದೆ. ಇದರರ್ಥ ಏಕತೆ ಮಾತ್ರವೇ ಇರಬೇಕೆಂದಲ್ಲ; ಚಕ್ರದ ನಾಭಿಯಂತೆಯೇ ಅದರ ಅರೆಗಳೂ, ಇತರ ಭಾಗಗಳೂ ಮುಖ್ಯ — ಅದೇ ರೀತಿ ಎಲ್ಲ ವೈವಿಧ್ಯತೆಗಳೂ ಇರಬೇಕು. ಅನೇಕತೆಯಲ್ಲಿ ಏಕತೆಯೇ ಭಾರತೀಯ ಜೀವನದ ವೈಶಿಷ್ಟ್ಯವೆಂಬುದನ್ನು ಸ್ವಾಮಿ ವಿವೇಕಾನಂದರು ಎತ್ತಿ ಹಿಡಿದರು. ವ್ಯಷ್ಟಿ-ಸಮಷ್ಟಿ, ಪೂರ್ಣ-ಅಂಶ; ಬ್ರಹ್ಮ-ಜಗತ್ತು, ಇವುಗಳ ನಡುವಿನ ಸಂಬಂಧ ಅಧ್ಯಾತ್ಮಕ್ಕೂ ನಮ್ಮ ಜನಜೀವನಕ್ಕೂ ಬೆಸೆದಿರುವ ಬಾಂಧವ್ಯವನ್ನು ತಿಳಿಸಿಕೊಡುತ್ತದೆ. ಇವು ವೇದಾಂತದ ಸೂಕ್ಷ್ಮತತ್ತ್ವಗಳು. ಭಾರತೀಯ ಧರ್ಮ, ಸಂಸ್ಕೃತಿ, ಅಧ್ಯಾತ್ಮವನ್ನು ಸರಿಯಾಗಿ ಅರಿತುಕೊಳ್ಳಲು ಈ ತತ್ತ್ವಗಳನ್ನು ಅರಿಯುವುದು ಅತ್ಯಂತ ಅಗತ್ಯ.

## ವಿಜ್ಞಾನದ ಕುಲುಮೆಯಲ್ಲಿ

ಪಶ್ಚಿಮ ದೇಶಗಳಲ್ಲಿ ರೂಪುತಾಳಿದ ಆಧುನಿಕ ವಿಜ್ಞಾನವು ಇಡೀ ಪ್ರಪಂಚದ ಚಿಂತನ ಕ್ರಮವನ್ನೇ ಬದಲಾಯಿಸಿದೆ. ಧರ್ಮ, ನಂಬಿಕೆ, ಸಮಾಜ, ಜನಜೀವನ — ಹೀಗೆ ವಿಜ್ಞಾನದ ಪ್ರಭಾವಕ್ಕೊಳಗಾಗದ ಕ್ಷೇತ್ರವೇ ಇಲ್ಲವೆನ್ನಬಹುದು. ವಿಜ್ಞಾನದ ಬೆಳವಣಿಗೆಯಲ್ಲಿ ಪ್ರಶ್ನಿಸುವ ಮನೋಭಾವ, ವಿಚಾರ-ಮಂಥನ, ಪ್ರಾಯೋಗಿಕತೆ, ವಾಸ್ತವತೆ — ಇವೆಲ್ಲ ಪ್ರಧಾನವಾದ ಕೆಲವು ನೈತಿಕ ಶಿಸ್ತುಗಳಾದವು. ಪ್ರಾಚೀನ ಕಾಲದಿಂದ ಮುಂದುವರಿದುಕೊಂಡು ಬಂದಿದ್ದ ಅನೇಕ ಸಂಪ್ರದಾಯ, ಆಚರಣೆ, ನಂಬಿಕೆಗಳೆಲ್ಲ ಹೊಸ ವೈಜ್ಞಾನಿಕ ವಿಚಾರಗಳ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದವು; ಕೆಲವೇ ಸಮಯದಲ್ಲಿ ಮಾಯವಾದವು. ಹಲವು ಧಾರ್ಮಿಕ ಸಂಪ್ರದಾಯಗಳಿಗೂ ಈ ವೈಜ್ಞಾನಿಕ ವಿಚಾರಗಳ ಬಿಸಿ ತಟ್ಟಿತು. ಆದರೆ ನಮ್ಮ ದೇಶದಲ್ಲಿ ವೈಜ್ಞಾನಿಕ ಶಿಕ್ಷಣ, ಆಧುನಿಕ ಮನೋಭಾವ, ಹೊಸ ಪ್ರಗತಿ ಉಂಟಾಗುವಾಗಲೇ ಭಾರತೀಯ ಸಂಸ್ಕೃತಿ, ಧರ್ಮ, ಆಧ್ಯಾತ್ಮಿಕತೆಗಳ ಪುನರುತ್ಥಾನ ಅಷ್ಟೇ ಪ್ರಬಲವಾಗಿ ಉಂಟಾಯಿತು. ಹತ್ತೊಂಬತ್ತನೇ ಶತಮಾನದಲ್ಲಿ ನಮ್ಮ ದೇಶದಾದ್ಯಂತ ಉದಿಸಿದ ಹಲವು ಮಂದಿ ಸಂತರು, ಧಾರ್ಮಿಕ ಮುಖಂಡರು ಹಾಗೂ ಇಂಗ್ಲಿಷ್ ವಿದ್ಯಾಭ್ಯಾಸ ಹೊಂದಿದ್ದ ನಮ್ಮ ಪುನರುತ್ಥಾನಕ್ಕಾಗಿ ಹೋರಾಡಿದ ನಮ್ಮ ನಾಯಕರು ಪಶ್ಚಿಮದ ವೈಜ್ಞಾನಿಕ ಸವಾಲನ್ನು ಸಮರ್ಥವಾಗಿ ಎದುರಿಸಿದರು.

ಇತ್ತೀಚೆಗೆ ಜಾಗತೀಕರಣ, ಕಂಪ್ಯೂಟರ್ ಮುಂತಾದ ಅತ್ಯಾಧುನಿಕ ತಂತ್ರಜ್ಞಾನ, ವಾಣಿಜ್ಯ-ವ್ಯವಹಾರಗಳ ಪೈಪೋಟಿ, ಸುದ್ದಿ ಮಾಧ್ಯಮಗಳ ವೈಭವೀಕರಣ — ಇತ್ಯಾದಿಗಳಿಂದ ಆಧುನಿಕತೆಯ ಹೊಸ ದಾಳಿ ನಡೆಯುತ್ತಿದೆ. ನಮ್ಮ ಧರ್ಮ, ಸಂಸ್ಕೃತಿಗಳಲ್ಲಿ ಅರ್ಥವಿಲ್ಲವೆಂಬ ವಾದವನ್ನು ಮತ್ತೆ ಪಸರಿಸಲಾಗುತ್ತಿದೆ. ಆದರೆ ಹಲವು ಬಾರಿ ನಡೆದಂತೆ, ಈ ಬಾರಿಯೂ ಅದೇ ರೀತಿಯ ಹೊಸ ಪುನರುತ್ಥಾನ ನಮ್ಮ ಸಂಸ್ಕೃತಿಯಲ್ಲೇ ನಡೆಯಲಿದೆ; ಹೊಸ ಬಗೆಯಲ್ಲಿ ಸನಾತನ ತತ್ತ್ವಗಳ ಮರುಸ್ಥಾಪನೆಯಾಗಲಿದೆ. ಭಾರತದ ಇತಿಹಾಸದಲ್ಲಿ ಹಲವು ಬಾರಿ ಪ್ರಮಾಣಗೊಂಡಿರುವ ಸತ್ಯವಿದು: ಇಲ್ಲಿನ ಧರ್ಮ, ಸಂಸ್ಕೃತಿ, ತತ್ತ್ವಗಳಿಗೆ ಧಕ್ಕೆಯಾದಾಗಲೆಲ್ಲ ಅದು ಮತ್ತಷ್ಟು ಶಕ್ತಿಪೂರ್ಣವಾಗಿ ಹೊರಹೊಮ್ಮುವುದು; ಇನ್ನಷ್ಟು ವೈಭವದಿಂದ ಬೆಳಗುವುದು.

## ನಮ್ಮ ಜೀವನದಲ್ಲಿ ದೇವರು

ಭಾರತೀಯ ಜನಜೀವನದಲ್ಲಿ ಆದಿಯಿಂದ ಅಂತ್ಯದವರೆಗೂ ದೇವರೇ ವ್ಯಾಪಿಸಿಕೊಂಡಿರುವುದನ್ನು ನಾವು ವಿಶೇಷವಾಗಿ ಗಮನಿಸಬೇಕು. ಮಗು ಹುಟ್ಟುವುದಕ್ಕೂ ಮುನ್ನ ಅದಕ್ಕೆ ಯೋಗ್ಯ ಸಂಸ್ಕಾರವಾಗಬೇಕು; ಪೂಜೆ, ವ್ರತಗಳನ್ನಾಚರಿಸಿ ಮಗುವಿನ ಆರೋಗ್ಯ, ಭವಿಷ್ಯ ಹಾಗೂ ಉತ್ತಮ ಸಂಸ್ಕಾರಕ್ಕಾಗಿ ಪ್ರಾರ್ಥಿಸಬೇಕು. ತಂದೆ, ತಾಯಿ ಇಬ್ಬರೂ ಮಗುವನ್ನು ಸ್ವಾಗತಿಸುವುದು ಹೀಗೆ — ಪ್ರಾರ್ಥನೆ, ಪೂಜೆ, ಧಾರ್ಮಿಕ ಆಚರಣೆಗಳಿಂದ. ಮಗು ಹುಟ್ಟಿದ ಕೂಡಲೇ ಹಲವಾರು ಬಗೆಯ ಆಚರಣೆಗಳು ಆರಂಭವಾಗುತ್ತವೆ. ಮಗು ಬೆಳೆಯುತ್ತಿದ್ದಂತೆಯೇ ದೇವರನ್ನು ಕುರಿತ ಹಲವು ಸಂಗತಿಗಳನ್ನು ನೋಡಿ ಕಲಿಯುತ್ತದೆ. ಹಾಡು, ಭಜನೆ, ನಾಮಜಪ, ವ್ರತ, ಪೂಜೆ, ಹಬ್ಬಹರಿದಿನ ಇತ್ಯಾದಿಗಳನ್ನು ಪ್ರತಿದಿನ ನೋಡುವ ಮಗುವಿಗೆ ಅವೆಲ್ಲ ಜೀವನದ ಅಂಗವಾಗಿದೆಯೆಂದೇ ಅನಿಸುತ್ತದೆ; ಪ್ರಯತ್ನವಿಲ್ಲದೆ ಎಲ್ಲವೂ ಕರಗತವಾಗುತ್ತದೆ. ಹೊಸದಾಗಿ ಎಲ್ಲವನ್ನೂ ರೂಢಿಸಿಕೊಳ್ಳಲು ಕಷ್ಟಪಡುವ ಆಧುನಿಕರು ಅಥವಾ ಪಾಶ್ಚಾತ್ಯರನ್ನು ಇಂಥ ಭಾರತೀಯ ಮಗುವಿನೊಂದಿಗೆ ಹೋಲಿಸಿ ನೋಡಬೇಕು. ಸಂಸ್ಕೃತಿಯು ನಮಗರಿವಿಲ್ಲದೆ ದೇವರ ಅಸ್ತಿತ್ವವನ್ನು ನಮ್ಮ ಜೀವನದ ಅಂಗವಾಗಿಸುವ ರೀತಿಯಿದು. ಇದು ಮಾನವನ ಮನಸ್ಸನ್ನು ಭಗವಂತನತ್ತ ಹಂತಹಂತವಾಗಿ ಕರೆದೊಯ್ಯಲು ಮಾಡಿರುವ ವ್ಯವಸ್ಥೆ. ಎಷ್ಟು ಮಂದಿ ದೇವರನ್ನು ಕಾಣುತ್ತಾರೆ ಎಂಬುದು ಮುಖ್ಯವಲ್ಲ ; ಸಮಾಜ ದೇವರನ್ನು ಯಾವ ರೀತಿ ತನ್ನ ಅಂಗವನ್ನಾಗಿಸಿದೆ ಎಂಬುದೇ ಇಲ್ಲಿ ಗಮನಾರ್ಹ. ಸ್ವಾಮಿ ವಿವೇಕಾನಂದರು ಹೇಳಿದಂತೆ, ಯಾವ ಸಮಾಜದಲ್ಲಿ ಒಬ್ಬನೇ ಒಬ್ಬ ವ್ಯಕ್ತಿಯಾದರೂ ಸಾಕ್ಷಾತ್ಕಾರ ಹೊಂದಿದವನು ಇರುವನೋ, ಅವನು ಆ ಸಮಾಜಕ್ಕೆ ಅತ್ಯಂತ ಶ್ರೇಷ್ಠ ವರದಾನ. ಈ ಉನ್ನತ ಆದರ್ಶವನ್ನರಿತು, ಸಮಾಜದ ಪ್ರತಿಯೊಂದು ಅಂಗದಲ್ಲೂ ದೇವರ ಅಸ್ತಿತ್ವವನ್ನು ಕಾಣುವುದಕ್ಕೆ ಅವಕಾಶವನ್ನು ನಿರ್ಮಿಸಿಕೊಟ್ಟಿರುವ ನಮ್ಮ ಸಂಸ್ಕೃತಿಯೇ ಧನ್ಯ.

### ಜುಲೈ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೯ | ಸೋಮವಾರ | ಏಕಾದಶಿ |
| ೨೩ | ಸೋಮವಾರ | ಏಕಾದಶಿ |
| ೨೭ | ಶುಕ್ರವಾರ | ಗುರುಪೂರ್ಣಿಮಾ |

# ಅದ್ವೈತಭಾವ



ಹಿಂದಿನ ಋಷಿಗಳಿಗೆ ಬ್ರಹ್ಮಜ್ಞಾನ ದೊರೆತಿತ್ತು. ವಿಷಯಬುದ್ಧಿ ಲೇಶಮಾತ್ರವಿದ್ದರೂ ಬ್ರಹ್ಮಜ್ಞಾನ ದೊರಕುವುದಿಲ್ಲ. ಋಷಿಗಳು ಎಷ್ಟು ಕಷ್ಟ ತೆಗೆದುಕೊಳ್ಳುತ್ತಿದ್ದರು ಏನು ಕತೆ! ಬೆಳಗಾಗೆದ್ದು ಆಶ್ರಮ ಬಿಟ್ಟು ಹೊರಟುಹೋಗುತ್ತಿದ್ದರು. ಇಡೀ ದಿನವೆಲ್ಲಾ ಏಕಾಂಗಿಯಾಗಿ ಭಗವಂತನ ಧ್ಯಾನಚಿಂತನೆಯಲ್ಲೇ ಕಳೆಯುತ್ತಿದ್ದರು. ರಾತ್ರಿ ವೇಳೆ ಆಶ್ರಮಕ್ಕೆ ಹಿಂತಿರುಗಿ ಬಂದು ಎಲ್ಲೋ ಸ್ವಲ್ಪ ಫಲಮೂಲಾದಿಗಳನ್ನು ತಿನ್ನುತ್ತಿದ್ದರು. ರೂಪ, ಶಬ್ದ, ಸ್ಪರ್ಶ ಇವೇ ಮೊದಲಾದ ವಿಷಯ ವಸ್ತುಗಳ ಕಡೆ ಮನಸ್ಸು ಹೋಗದ ಹಾಗೆ ನೋಡಿಕೊಳ್ಳುತ್ತಿದ್ದರು. ಅಷ್ಟು ಕಷ್ಟ ತೆಗೆದುಕೊಳ್ಳುತ್ತಿದ್ದುದರಿಂದಲೇ ಅವರು ಬ್ರಹ್ಮ ತಮ್ಮ ಅಂತರ್ಯಾಮಿ ಎಂಬ ಅನುಭವ ಪಡೆಯುತ್ತಿದ್ದರು.

ಜ್ಞಾನಿ 'ನೇತಿ' 'ನೇತಿ' ಮಾರ್ಗ ಅನುಸರಿಸಿ ವಿಷಯಬುದ್ಧಿಯನ್ನು ಪೂರ್ಣವಾಗಿ ತ್ಯಾಗ ಮಾಡುತ್ತಾನೆ. ಆಗ ಮಾತ್ರವೇ ಅವನಿಗೆ ಬ್ರಹ್ಮನ ಸಾಕ್ಷಾತ್ಕಾರ. ಇದು ಮೆಟ್ಟಿಲ ಸಾಲಿನ ಹಂತಗಳನ್ನು ಒಂದೊಂದಾಗಿ ಹಿಂದೆಬಿಟ್ಟು ಚಾವಣಿ ಮುಟ್ಟುವ ಹಾಗೆ. ಆದರೆ ವಿಜ್ಞಾನಿ ವಿಶೇಷ ರೀತಿಯಾಗಿ ಬ್ರಹ್ಮನೊಡನೆ ಬೆರೆತು ಇನ್ನೂ ವಿಶೇಷವಾದ ಅನುಭವ ಪಡೆಯುತ್ತಾನೆ. ಆತ ಅನುಭವ ಪಡೆದುಕೊಳ್ಳುತ್ತಾನೆ — ಚಾವಣಿ ಯಾವ್ಯಾವ ವಸ್ತುಗಳಿಂದ ಅಂದರೆ, ಇಟ್ಟಿಗೆ, ಸುಣ್ಣ, ಇಟ್ಟಿಗೆಚೂರು ಇವುಗಳಿಂದ ನಿರ್ಮಿತವಾಗಿವೆಯೊ, ಅದೇ ವಸ್ತುಗಳಿಂದ ಮೆಟ್ಟಿಲ ಸಾಲೂ ನಿರ್ಮಿತವಾಗಿದೆ ಎಂಬುದಾಗಿ. 'ನೇತಿ' 'ನೇತಿ' ಮಾರ್ಗವನ್ನು ಅನುಸರಿಸಿ ಯಾವ ವಸ್ತುವನ್ನು ಬ್ರಹ್ಮ ಎಂಬುದಾಗಿ ಅರಿತುಕೊಂಡನೊ, ಅದೇ ವಸ್ತು ಜೀವ ಜಗತ್ತಾಗಿಯೂ ಇರುವುದು ಎಂದು ಆತನ ಅರಿವಿಗೆ ಬರುತ್ತದೆ. ಯಾರು ನಿರ್ಗುಣನೋ ಆತನೇ ಸಗುಣ ಎಂಬುದಾಗಿ ವಿಜ್ಞಾನಿಗೆ ಕಂಡುಬರುತ್ತದೆ.

ಜ್ಞಾನಯೋಗಿ ಜ್ಞಾನಮಾರ್ಗನಿಷ್ಠನಾಗಿ ಸರ್ವದಾ 'ನೇತಿ, ನೇತಿ' ಎಂಬ ವಿಚಾರದಲ್ಲಿ , ಅಂದರೆ 'ಬ್ರಹ್ಮ ಇದಲ್ಲ , ಅದಲ್ಲ, ಜೀವವಲ್ಲ , ಜಗತ್ತಲ್ಲ' ಎಂಬ ವಿಚಾರದಲ್ಲಿ ತೊಡಗಿರುತ್ತಾನೆ. ಈ ರೀತಿಯಾಗಿ ವಿಚಾರ ಮಾಡುತ್ತ ಮಾಡುತ್ತ ಮುಂದುವರಿದರೆ ಮನಸ್ಸು ಸ್ಥಿರವಾಗುತ್ತದೆ. ಬಳಿಕ ಮನಸ್ಸು ಲಯ ಹೊಂದುತ್ತದೆ, ಸಮಾಧಿಯುಂಟಾಗುತ್ತದೆ; ಆಗ ಬ್ರಹ್ಮಜ್ಞಾನ ದೊರೆಯುತ್ತದೆ. ಬ್ರಹ್ಮಜ್ಞಾನಿಯ ನಿಶ್ಚಿತಾಭಿಪ್ರಾಯ ಬ್ರಹ್ಮಸತ್ಯ ಜಗನ್ಮಿಥ್ಯಾ. ಈ ನಾಮರೂಪಗಳೆಲ್ಲ ಸ್ವಪ್ನದ ಹಾಗೆ ಮಿಥ್ಯಾ. ಬ್ರಹ್ಮ ಏನು ಎಂಬುದನ್ನು ಬಾಯಿಂದ ವರ್ಣಿಸಲಾಗುವುದಿಲ್ಲ. ಆತನನ್ನು ಒಬ್ಬ ವ್ಯಕ್ತಿ ಎಂತಲೂ ಹೇಳಲಾಗುವುದಿಲ್ಲ. ಹೀಗೆಂದು ಜ್ಞಾನಿಗಳು – ವೇದಾಂತವಾದಿಗಳು ಹೇಳುತ್ತಾರೆ.

ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡಿದ್ದರೆ ಮಾತ್ರ ಆತನ ಸಂಬಂಧವಾಗಿ ಯಥಾರ್ಥವಾಗಿ ಹೇಳಬಹುದು. ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೋ, ಆತನಿಗೆ ಚೆನ್ನಾಗಿ ಗೊತ್ತಿದೆ, ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು — ಎಂಬುದು. ಆತ ಇನ್ನೂ ಏನೇನು ಆಗಿದ್ದಾನೋ ಅದನ್ನು ಹೇಳಲಾಗುವುದಿಲ್ಲ.

ಭಗವಂತನ ದರ್ಶನವಾದ ನಂತರ ಗುರು–ಶಿಷ್ಯರ ಭೇದವಿರದು. ಅದು ಬಹಳ ತೊಡಕಿನ ಸನ್ನಿವೇಶವನ್ನು ಸೃಜಿಸುತ್ತದೆ. ಅಲ್ಲಿ ಗುರು–ಶಿಷ್ಯರು ಒಬ್ಬರನ್ನೊಬ್ಬರು ಗುರುತಿಸಲಾರರು. ಇದಕ್ಕಾಗಿಯೇ ಜನಕರಾಜ ಶುಕದೇವನಿಗೆ ಹೇಳಿದ: 'ನಿನಗೆ ಬ್ರಹ್ಮಜ್ಞಾನ ಬೇಕಾಗಿದ್ದರೆ ಮೊದಲು ಗುರುದಕ್ಷಿಣೆ ಕೊಡು.' ಏಕೆಂದರೆ, ಬ್ರಹ್ಮಜ್ಞಾನ ದೊರೆತನಂತರ ಈತ ಗುರು, ತಾನು ಶಿಷ್ಯ ಎಂಬ ಭೇದಬುದ್ಧಿ ಇರದು. ಭಗವಂತನ ಸಾಕ್ಷಾತ್ಕಾರವಾಗದೆ ಇರುವವರೆಗೆ ಮಾತ್ರ ಗುರು–ಶಿಷ್ಯ ಸಂಬಂಧ.

ಬ್ರಹ್ಮ ಅವಾಙ್ಮನಸಗೋಚರ ಎಂಬುದಾಗಿ ವೇದಗಳಲ್ಲಿ ಹೇಳಿದೆ. ಜ್ಞಾನಸೂರ್ಯನ ತಾಪದಿಂದ ಹಿಮಗಡ್ಡೆಯಂತಹ ಭಗವಂತನ ಸಾಕಾರ ರೂಪ ಕರಗಿಹೋಗುತ್ತದೆ. ಬ್ರಹ್ಮಜ್ಞಾನ ದೊರೆತ ನಂತರ ಅಂದರೆ, ನಿರ್ವಿಕಲ್ಪಸಮಾಧಿ ದೊರೆತನಂತರ, ಅದರಲ್ಲಿ ಅದೇ ಅನಂತ ವಾಙ್ಮನಾತೀತ ಅರೂಪ ನಿರಾಕಾರ ಬ್ರಹ್ಮನ ದರ್ಶನ.

ಪರಬ್ರಹ್ಮನ ಸ್ವರೂಪ ಏನೆಂಬುದಾಗಿ ಬಾಯಲ್ಲಿ ಹೇಳಲಾಗುವುದಿಲ್ಲ. ಅದರ ಸಂಬಂಧವಾಗಿ ಮಾತೇ ಹೊರಡುವ ಹಾಗಿಲ್ಲ. ಅನಂತವನ್ನು ಯಾರು ತಾನೇ ಮಾತಿನಿಂದ ವರ್ಣಿಸಬಲ್ಲರು? ಹಕ್ಕಿ ಎಷ್ಟೇ ಎತ್ತರಕ್ಕೆ ಹಾರಿಹೋದರೂ, ಅದು ಹಾರಿ ಹೋಗಬೇಕಾದ ಎತ್ತರ ಇನ್ನು ಉಳಿದುಕೊಂಡೇ ಇರುತ್ತದೆ.

ಯಾವಾಗ ಭಗವಂತ ಸೃಷ್ಟಿ–ಸ್ಥಿತಿ–ಪ್ರಳಯ ಕಾರ್ಯಗಳನ್ನು ಮಾಡುತ್ತಾನೋ, ಆಗ ಆತನಿಗೇ ಸಗುಣಬ್ರಹ್ಮ ಅಥವಾ ಆದ್ಯಾಶಕ್ತಿ ಅಂತ ಹೆಸರು; ಯಾವಾಗ ಆತನನ್ನು ತ್ರಿಗುಣಾತೀತ ಎಂಬುದಾಗಿ ಭಾವಿಸುತ್ತೇವೆಯೋ, ಆಗ ಆತನಿಗೆ ವಾಙ್ಮನಾತೀತ ನಿರ್ಗುಣಬ್ರಹ್ಮ ಅಂತ ಹೆಸರು–ಪರಬ್ರಹ್ಮ ಅಂತ ಹೆಸರು.

ಚಿದಾನಂದವನ್ನು ಆರೋಪಿಸಿಕೊಳ್ಳಿ. ನಿಮಗೂ ಆನಂದ ಉಂಟಾಗುತ್ತದೆ. ಚಿದಾನಂದ ಯಾವಾಗಲೂ ನಿಮ್ಮಲ್ಲಿ ಇದ್ದೇ ಇದೆ. ಅದು ಆವರಣ ವಿಕ್ಷೇಪಶಕ್ತಿಗಳಿಂದ ಕೇವಲ ಮುಚ್ಚಲ್ಪಟ್ಟಿದೆ. ವಿಷಯಾಸಕ್ತಿ ಕಡಿಮೆಯಾದಷ್ಟೂ ಭಗವಂತನಲ್ಲಿ ಪ್ರೀತಿ ಅಧಿಕವಾಗುತ್ತ ಬರುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಇಳಿ ವಯಸ್ಸಿನಲ್ಲಿ ಆನಂದವನ್ನು ಪಡೆಯುವುದು ಹೇಗೆ

ಭಾಗ ೨

**ಸ್ವಾಮಿ ರಂಗನಾಥಾನಂದ**



**ಈ**ಶೋಪನಿಷತ್ತಿನಲ್ಲಿ ಸಂಭಾವಿತ ಮನಸ್ಸಿನ, ತನ್ನ ಜೀವನದುದ್ದಕ್ಕೂ ಆಧ್ಯಾತ್ಮಿಕ ಜೀವನವನ್ನು ಪಡೆಯಲು ಹೋರಾಡುವ ಭಕ್ತನೊಬ್ಬನನ್ನು ಕಾಣಬಹುದು. ಈಗ ಅವನ ಜೀವನ ಅಂತ್ಯಗೊಳ್ಳುತ್ತಿದೆ, ಅವನು ಮೃತ್ಯುವನ್ನು ಹೇಗೆ ಎದುರಿಸಬೇಕು? ಮೃತ್ಯುವನ್ನು ಅತ್ಯುತ್ತಮ ರೀತಿಯಲ್ಲಿ ಎದುರಿಸಬೇಕು – ಇದು ಅದ್ಭುತವಾದ ಸಂಗತಿ. ಹಾಸಿಗೆ ಹಿಡಿದಿರುವ ಅವನು ಹೀಗೆ ಚಿಂತಿಸುತ್ತಾನೆ; ''ಹೌದು, ಈ ದೇಹ ಶಿಥಿಲವಾಗುತ್ತಿದೆ. ಇದು ನನ್ನೊಂದಿಗೆ ನಾನು ಹೊತ್ತು ತಂದ ರಸಾಯನಶಾಸ್ತ್ರದ ಪ್ರಯೋಗಶಾಲೆ. ಈಗ ಇದನ್ನು ಮೂಲೆಗೆಸೆಯುವ ಕಾಲ ಬಂದಿದೆ. ಇದೇ ದೇಹದ ಸ್ವಭಾವ.'' ಮುಂದೆ ಅವನು ಹೇಳುತ್ತಾನೆ, ''ಮನಸ್ಸೇ! ಅತ್ಯುನ್ನತವಾದುದನ್ನು ಚಿಂತಿಸು. ಈ ದೇಹ ಇನ್ನೇನು ಬಿದ್ದು ಹೋಗಲಿದೆ. ಇದನ್ನು ಅಗ್ನಿ ಸುಟ್ಟು ಬೂದಿ ಮಾಡುವುದು. ಇದರ ಕೆಲಸ ಮುಗಿಯಿತು. ಆದರೆ ಮನಸ್ಸೇ – ನೀನು ಮಾಡಿದ ಉತ್ತಮ ಕರ್ಮಗಳನ್ನು ನೆನೆ. ನೀನು ಬಾಳಿದ ಒಳ್ಳೆಯ ಬದುಕನ್ನು, ಉನ್ನತವಾದ ಸಂಗತಿಗಳನ್ನು ನೆನೆಪಿಸಿಕೋ.'' ಅತ್ಯುತ್ತಮ ರೀತಿಯಲ್ಲಿ ಸಾಯುವ ಬಗೆಯನ್ನು ಇಲ್ಲಿ ವರ್ಣಿಸಿರುವುದು ಹೀಗೆ. ಸಾಯುವ ಗಳಿಗೆಯಲ್ಲೂ ಧನಾತ್ಮಕವಾದ ಚಿಂತನೆ. ಮಾನವ ಜೀವನದ ಪರೀಕ್ಷೆ ಇದು; ಅವನು ಈ ಜಗತ್ತಿನಲ್ಲಿ ಹೇಗೆ ನೆಲೆಸಿದ್ದ ಎಂಬುದು. ಸಾವಿನ ಗಳಿಗೆಯಲ್ಲಿ ಅಸಾಧಾರಣ ಧೈರ್ಯವನ್ನು ಪ್ರದರ್ಶಿಸಿದ ಹಲವು ಮಂದಿ ವ್ಯಕ್ತಿಗಳ ಉದಾಹರಣೆಗಳನ್ನು ನಾನು ಕಂಡಿದ್ದೇನೆ. ಅವರಿಗೆಲ್ಲ ಶಾಂತಿ, ಸ್ಥೈರ್ಯ ಲಭಿಸಿವೆ.

ದೆಹಲಿಯಲ್ಲಿ ಗೃಹಕಾರ್ಯದರ್ಶಿಗಳಾಗಿದ್ದ ಶ್ರೀ ಬೇಹ್ಲ್ ಪಿ.ಎಸ್. ಅವರು ನಮ್ಮ ಭಕ್ತರಾಗಿದ್ದರು. ಅವರ ಪತ್ನಿ ಶ್ರೀಮತಿ ಉಷಾ ಬೇಹ್ಲ್ ಅವರು ಒಳ್ಳೆಯ ಭಕ್ತೆ. ಅಲ್ಲಿ ಎಲ್ಲರೂ ಉಷಾ ಅವರನ್ನು ಸ್ಮರಿಸಿಕೊಳ್ಳುತ್ತಿದ್ದರು. ಅವರ ಅಜ್ಜ ಪಂಜಾಬಿನ ಪ್ರಸಿದ್ಧ ನಾಯಕರಾಗಿದ್ದ ಮಹಾತ್ಮಾ ಹಂಸರಾಜ್. ಒಂದು ದಿನ ಉಷಾ ಅವರ ಆರೋಗ್ಯ ತಪಾಸಣೆ ಮಾಡಿದಾಗ ಅವರಿಗೆ ಕ್ಯಾನ್ಸರ್ ಇದ್ದುದಾಗಿ ತಿಳಿದುಬಂತು. ಆಕೆ ನಮ್ಮ ಸಂಘಕೋಸ್ಕರ ಅತ್ಯುತ್ತಮ ಕೆಲಸ ಮಾಡುತ್ತಿದ್ದರು. ಸ್ವಿಟ್ಜರ್‌ಲೆಂಡ್ ಹಾಗೂ ಮುಂಬೈಯಲ್ಲಿ ಅವರ ಕ್ಯಾನ್ಸರ್‌ಗೆ ಚಿಕಿತ್ಸೆ ಮಾಡಲಾಯಿತು. ಆದರೆ ಅದು ಗುಣವಾಗುವುದು ಕಷ್ಟವೆನಿಸಿತು; ಕ್ಯಾನ್ಸರ್ ಇನ್ನಷ್ಟು ವ್ಯಾಪಿಸುತ್ತಿತ್ತು, ಅಷ್ಟೆ. ಒಂದು ದಿನ ಆಕೆಯ ಪತಿ ಹಾಗೂ ಉಳಿದ ಬಂಧು ಬಾಂಧವರೆಲ್ಲ ಮುಂಬೈಯಲ್ಲಿ ಅವರನ್ನು ಕಾಣಲು ಹೋದರು. ಅವರ ಕೋಣೆಯಲ್ಲಿ ಅವರೊಂದಿಗೆ ಮಾತನಾಡುತ್ತಿದ್ದರು. ಸ್ವಲ್ಪ ಹೊತ್ತಿನ ನಂತರ ಆಕೆ, ''ಅಲ್ಲಿ ಗೋಡೆಯಲ್ಲಿರುವ ಶ್ರೀರಾಮ ಕೃಷ್ಣರ ಭಾವಚಿತ್ರವನ್ನು ಇಲ್ಲಿಗೆ ತನ್ನಿ. ಅದನ್ನು ನಾನು ಕೈಯಲ್ಲಿ ಹಿಡಿದುಕೊಳ್ಳಬೇಕು'' ಎಂದರು. ಅವರು ಅದನ್ನು ಆಕೆಗೆ ತಂದು ಕೊಟ್ಟರು. ಆಗ ಶ್ರೀಮತಿ ಉಷಾ, ''ನೀವೆಲ್ಲ ದಯವಿಟ್ಟು ಸ್ವಲ್ಪ ಸಮಯದ ಮಟ್ಟಿಗೆ ಪಕ್ಕದ ಕೋಣೆಗೆ ಹೋಗುವಿರಾ? ಸ್ವಲ್ಪ ಹೊತ್ತು ನಾನು ಒಬ್ಬಂಟಿಯಾಗಿ ಇರಬಯಸುತ್ತೇನೆ'' ಎಂದು ವಿನಂತಿಸಿಕೊಂಡರು. ಅವರೆಲ್ಲ ಆ ಭಾವಚಿತ್ರವನ್ನು ಆಕೆಯ ಬಳಿ ಬಿಟ್ಟು ಪಕ್ಕದ ಕೋಣೆಗೆ ಹೋದರು. ಕೆಲವು ನಿಮಿಷಗಳ ನಂತರ ಅವರು ಆಕೆಯ ಕೋಣೆಯ ಬಾಗಿಲನ್ನು ತೆರೆದಾಗ ಆಕೆ ಹೊರಟು ಹೋಗಿದ್ದರು – ಅವರ ಪ್ರಾಣ ಹೊರಟುಹೋಗಿತ್ತು. ಆ ಕೋಣೆಯಲ್ಲಿ ಇರುವುದೆಂದರೆ ದೇವಾಲಯದಲ್ಲಿ ಇರುವಂತೆ ಅವರ ಪತಿಗೆ ಅನ್ನಿಸುತ್ತಿತ್ತು. ಎಂಥ ಅದ್ಭುತವಾದ ಮರಣ! ಇಂಥ ಅನುಭವಗಳು ಇನ್ನೂ ಹಲವರಿಗಾಗಿದೆ.

ಜಲಂಧರ್‌ನಲ್ಲಿ ನಾನು ಅತಿಥಿಯಾಗಿದ್ದುದು ಶ್ರೀ ಜಗನ್ನಾಥ ಟಂಡನ್ ಅವರ ಮನೆಯಲ್ಲಿ ; ಅವರ ಪತ್ನಿ ಶ್ರೀಮತಿ ಮಾಯಾದೇವಿ. ಅವರ ತಮ್ಮ ಶ್ರೀ ಬಿ.ಆರ್.ಟಂಡನ್, ಐ.ಸಿ.ಎಸ್ ಅವರೂ ಅಲ್ಲಿದ್ದರು. ಅವರ ಮಗ ಸುಭಾಷ್ ಟಂಡನ್ ಅವರು ದೆಹಲಿ ಪೋಲಿಸ್ ಕಮಿಷನರ್ ಆಗಿದ್ದರು. ಈ ಕುಟುಂಬ ಕರಾಚಿಯಿಂದ ಬಂದಿತ್ತು. ಮಾಯಾದೇವಿ ತುಂಬಾ ಭಕ್ತಿಯಿಂದ ಕೂಡಿದವರು; ನಾನು ಜಲಂಧರ್‌ನಲ್ಲಿ ಅವರ ಮನೆಯಲ್ಲಿದ್ದೆ. ಮೂರು ವರ್ಷಗಳಿಗೆ ಮುನ್ನ ಮುಂಬೈಯಲ್ಲಿ ಏನಾಯಿತು ಗೊತ್ತೆ? ಒಂದು ದಿನ ಗಂಡಹೆಂಡರಿಬ್ಬರೂ ಬೆಳಿಗ್ಗೆ ೪ ಗಂಟೆಗೇ ಎದ್ದು ಕುಳಿತು ಭಜನೆ ಹಾಡತೊಡಗಿದರು. ಅನಂತರ ಆಕೆ ತನ್ನ ಪತಿಗೆ, ''ಕೋಣೆಗೆ

ಹೋಗಿ ಒಂದಿಷ್ಟು ವಿಶ್ರಾಂತಿ ಪಡೆಯಿರಿ. ನೀವು ತುಂಬ ಆಯಾಸ ಗೊಂಡಿದ್ದೀರಿ, ಹೋಗಿ'' ಎಂದಳು. ಆಕೆ ಅಲ್ಲೇ ನಿದ್ರಿಸಿದಳು. ಪತಿ ವಿಶ್ರಾಂತಿಯ ಬಳಿಕ ಎದ್ದು ಬಂದು ನೋಡಿದಾಗ ಮಾಯಾದೇವಿ ಅಸುನೀಗಿದ್ದಳು. ಅದೆಷ್ಟು ಧೈರ್ಯದಿಂದ ದೇಹತ್ಯಾಗ ಮಾಡಿದ್ದಳು! ಆಕೆ ಯಾವಾಗಲೂ ಉಲ್ಲಾಸದಿಂದಿದ್ದ ಮಹಿಳೆ. ಜಲಂಧರ್‌ನ ಕನ್ಯಾ ಮಹಾವಿದ್ಯಾಲಯದ ಹಳೆಯ ವಿದ್ಯಾರ್ಥಿನಿ. ಕರಾಚಿಯಲ್ಲಿದ್ದಾಗ ಆಕೆ ಆ ಕಾಲೇಜನ್ನು ಕುರಿತು ನನಗೆ ಹೇಳುತ್ತಿದ್ದಳು. ಅಲ್ಲಿ ನಾನು ೨-೩ ಬಾರಿ ಭಾಷಣ ಮಾಡಿದ್ದೆ.

ನಾವು ಹೇಗೆ ನಮ್ಮ ಜೀವನವನ್ನು ರೂಪಿಸಿಕೊಳ್ಳಬಹುದು ಎಂಬುದನ್ನು ಈ ಉದಾಹರಣೆಗಳ ಮೂಲಕ ತಿಳಿಯಬಹುದು. ಬಾಹ್ಯಶಕ್ತಿಗಳ ಸೆಳೆತಕ್ಕೆ ನಾವು ಬಲಿಯಾಗದಂತೆ ನೋಡಿಕೊಳ್ಳಬೇಕು. ಇಡೀ ವ್ಯವಸ್ಥೆಯ ಮೇಲೆ ಹೇಗೆ ನಿಯಂತ್ರಣ ಹೊಂದಿರಬೇಕು ಹಾಗೂ ಹೇಗೆ ಅದನ್ನು ರೂಪಿಸಿಕೊಳ್ಳಬೇಕು ಎಂಬುದನ್ನು ನಾವು ತಿಳಿದಿದ್ದೇವೆ. ಆಧ್ಯಾತ್ಮಿಕತೆ ಪ್ರಸ್ತುತವಾಗುವುದು ಇಲ್ಲಿಯೇ. ನಾವು ಗ್ರಹಿಸಬಹುದಾದ ಅನುಭವವದು. ಆಧ್ಯಾತ್ಮಿಕವಾಗಿರುವುದೇ ಧರ್ಮದ ಗುರಿ. ಕೇವಲ ಧಾರ್ಮಿಕ ವಾಗಿರುವುದಷ್ಟೇ ಅಲ್ಲ. ಧಾರ್ಮಿಕವಾಗಿರುವುದು ತುಂಬ ಸುಲಭ. ಕಿವಿಯಲ್ಲಿ ಒಂದೆರಡು ತುಳಸಿ ಎಲೆ ಇಟ್ಟುಕೊಳ್ಳುವುದು, ಹಣೆಯಲ್ಲಿ ವಿಭೂತಿ ಅಥವಾ ನಾಮ ಧರಿಸಿಕೊಳ್ಳುವುದು ಇದರಿಂದ ನೀವು ಧಾರ್ಮಿಕರಾಗಬಹುದು. ಆದರೆ ಆಧ್ಯಾತ್ಮಿಕತೆಯೆಂದರೆ ಇನ್ನೂ ಹೆಚ್ಚಿನದು.

ಇದನ್ನು ಯುವ ಜನಾಂಗ ಇಂದಿನವರೆಗೂ ನಿರ್ಲಕ್ಷಿಸಿದೆ. ಇನ್ನು ಮುಂದೆ ಅವರು ಹೀಗೆ ನಿರ್ಲಕ್ಷಿಸಬಾರದು. ಈ ಮೂಲಕ ಒಬ್ಬನು ಇನ್ನೂ ಚಿಕ್ಕವನಿರುವಾಗಲೇ ಆಧ್ಯಾತ್ಮಿಕನಾಗಿರಬಹುದು; ಅವನು ವೃದ್ಧನಾದಾಗ ಅವನಲ್ಲಿ ಆಧ್ಯಾತ್ಮಿಕತೆ ಹೆಚ್ಚಾಗುವುದು. ಏಕೆಂದರೆ ಆಗ ಅವನಿಗೆ ಅಲ್ಲಿ ತಡೆಯಾಗುವ ಅಂಶಗಳಿರುವುದಿಲ್ಲ. ಆಗ ಜೀವನ ಆನಂದಕರವಾಗುವುದು. ದೇಹ ಕ್ರಮೇಣ ದುರ್ಬಲವಾಗುವುದು. ದೇಹಕ್ಕೆ ಮುಪ್ಪು ಬರುವುದು ಅದರ ಸ್ವಭಾವವೇ ಆಗಿದೆ. ಇದಕ್ಕೆ ಅತ್ಯಂತ ಅದ್ಭುತವಾದ ಬೌದ್ಧಿಕ ಸೂತ್ರ ನಮ್ಮಲ್ಲಿದೆ. ಯಾವುದೇ ಭಾಗಗಳನ್ನು ಒಂದುಗೂಡಿಸಿ ಮಾಡಿದ ಸಂಯೋಜನೆ ಎಂದಿಗೂ ಶಾಶ್ವತವಾಗಿರಲಾರದು. ಅವುಗಳು ಬೇರ್ಪಡಲೇಬೇಕು; ದೂರವಾಗಬೇಕು. ಇದು ಇಲ್ಲಿನ ಭಾವ. ಈ ದೇಹ ವಿವಿಧ ಅಂಗಗಳ, ಭಾಗಗಳ ಸಂಯೋಗವಲ್ಲದೆ ಇನ್ನೇನು? ಇದರಲ್ಲಿ ಬೆಳವಣಿಗೆ, ಕ್ಷೀಣಿಸುವಿಕೆ, ಕೊನೆಗೆ ನಾಶ — ಇವೆಲ್ಲವೂ ಇವೆ. ಒಂದು ದಿನ ಸೂರ್ಯನೂ ಮಾಯವಾಗಲೇಬೇಕು. ಸೂರ್ಯನಿಗೆ ಶಾಶ್ವತ ಜೀವನವೇನೂ ಇಲ್ಲ ; ಅದೂ ಹಲವಾರು ಮೂಲ ವಸ್ತುಗಳ ಸಂಯೋಗ. ಈ ವಿವಿಧ ಮೂಲವಸ್ತುಗಳು ಬೇರ್ಪಡುವವು ಹಾಗೂ ಇಲ್ಲದಾಗುವವು. '**ವಿವೇಕ ಚೂಡಾಮಣಿ**'ಯಲ್ಲಿ ಹೇಳಿರುವ ಆರು ಬಗೆಯ ಬದಲಾವಣೆ ಎಂದರೆ ಇದೇ. ಬದಲಾವಣೆಯೆಂಬ ಈ ಆರು ಬಗೆಯ ಅಲೆಗಳಿಂದ ಮುಕ್ತವಾಗಿರುವುದೇ ಆತ್ಮ ಎಂದು ಇಲ್ಲಿ ಶಂಕರಾಚಾರ್ಯರು ಹೇಳುತ್ತಾರೆ. '**ಷಡ್ಭಿರೂರ್ಮಿಭಿಃ**' – ಈ ಆರು ಬಗೆಯ ಬದಲಾವಣೆಯೆಂಬ ಅಲೆಗಳಿಂದ ಸ್ಪರ್ಶ ಹೊಂದದಿರುವುದೇ ಆತ್ಮ. ಅವು ಯಾವುವು? *ಜಾಯತೇ* – ಹುಟ್ಟುತ್ತದೆ; ಬಳಿಕ *ಅಸ್ತಿ* – ಅದಕ್ಕೆ ಅಸ್ತಿತ್ವವಿರುವುದು; *ವರ್ಧತೇ* – ಅದು ಬೆಳೆಯುವುದು; *ವಿಪರಿಣಮತೇ* – ಅದು ಬದಲಾಗುವುದು; *ಅಪಕ್ಷೀಯತೇ* – ಕ್ಷಯಿಸುವುದು; *ವಿನಶ್ಯತೇ* – ನಶಿಸುವುದು. ಈ ಪ್ರಪಂಚದಲ್ಲಿರುವ ಪ್ರತಿಯೊಂದೂ ಈ ಆರು ಬಗೆಯ ಬದಲಾವಣೆಯೆಂಬ ಅಲೆಗಳಿಗೆ ಒಳಗಾಗುವುದು. ಆತ್ಮವೊಂದೇ ಇದರಿಂದ ಮುಕ್ತವಾಗಿರುವುದು. '**ಅದು ನಾನೇ**' ಎಂಬ ಅರಿವನ್ನು ವೇದಾಂತ ನಮಗೆ ಕಲಿಸುತ್ತದೆ. ಭಗವಂತನ ಮಗುವಾಗಿ, ಆತ್ಮನಾಗಿ ನಾವು ಅದೇ ಆಗಿದ್ದೇವೆ; ನಾವು ಈ ಕ್ಷುದ್ರ ದೇಹವಲ್ಲ. ಅದು ನನ್ನ ಸೇವಕ, ಅದು ನನ್ನ ಒಂದು ಉಪಕರಣ; ನಾನು ವಾಸ ಮಾಡುವ ಮನೆ ಅದು. ದೇಹಕ್ಕೆ ನಾವು ನೀಡಬೇಕಾದ ಸ್ಥಾನವಿದು. ಈ ಜ್ಞಾನವನ್ನು ನಾವು ಬಲಪಡಿಸಿದ್ದೇ ಆದರೆ, ನಾವು ದೈಹಿಕವಾಗಿ ಬೆಳೆದರೂ ಕೂಡ, ಮಾನಸಿಕವಾಗಿ ಯುವಕರಾಗಿರುವೆವು. ಇದು ಖಂಡಿತ ಸಾಧ್ಯ. ದೈಹಿಕವಾಗಿ ನಾನು ಪ್ರೌಢನಾಗಿರಬಹುದು; ಆದರೆ ಮಾನಸಿಕವಾಗಿ ನಾನು ಇನ್ನೂ ಎಳೆಯವನಾಗಿರಬಹುದು. ಹಲವರು ದೈಹಿಕವಾಗಿ ಪ್ರೌಢರು: ಮಾನಸಿಕವಾಗಿ ಬಾಲಕರು. ಬದಲಾಗಿ, ವೃದ್ಧಾಪ್ಯದಲ್ಲಿ ದೇಹ ದುರ್ಬಲವಾಗಿರಬಹುದು, ಆದರೆ ಮನಸ್ಸು ಶಕ್ತಿಪೂರ್ಣವಾಗಿರಬಹುದು, ಬಲಶಾಲಿಯಾಗಿರಬಹುದು. ಹೇಗೆ? ಇಂಥ ಆಧ್ಯಾತ್ಮಿಕ ಸ್ಪರ್ಶದಿಂದ. ಪ್ರತಿಯೊಬ್ಬ ಮಾನವನ ಹಿಂದೆ ದೇವರಿದ್ದಾನೆ, ಆತ್ಮನಿದ್ದಾನೆ. ಆದರೆ ಮನಸ್ಸಿಗೆ ಇದು ತಿಳಿದಿರುವುದಿಲ್ಲ. ನಾವು ಅತೀತವಾದುದನ್ನು(ಆಚಿನದನ್ನು) ಕಾಣಲು ಕಲಿಯಬೇಕು. ಇದೇ ಆಧ್ಯಾತ್ಮಿಕ ಜೀವನದ ಸ್ವಭಾವ.

ಏಕಾಂತವಾಗಿದ್ದಾಗ ಮಕ್ಕಳು ಹೆದರುತ್ತಾರೆ, ಅಳುತ್ತಾರೆ. ಆದರೆ ತಾಯಿಯನ್ನು ಕಂಡ ಕೂಡಲೇ ಅವರ ಅಳು ನಿಲ್ಲುತ್ತದೆ. ಇದೇ ರೀತಿ, ಮಗುವಿನ ಹಿಂದೆ ತಾಯಿ ಇರುವಂತೆ ಮಾನವನಲ್ಲಿ ದೇವರ ಅಸ್ತಿತ್ವ ಕೂಡ. ತಾಯಿ ತನ್ನ ಹಿಂದೆ ಇದ್ದಾಳೆಂಬುದನ್ನು ಅರಿತ ಕೂಡಲೇ ಮಗುವಿಗಿನ್ನು ಭಯವಿರದು. ಮಗು ಹಿಂದಕ್ಕೆ ತಿರುಗಿ ಹೇಳುತ್ತದೆ, ''ಹೌದು, ತಾಯಿ ನನ್ನ ಹಿಂದಿದ್ದಾಳೆ'' ಅಂತ. ಹಾಗಿಲ್ಲದೆ ಹೋದರೆ ಅದಕ್ಕೆ ಭಾರೀ ಭಯ. ಶ್ರೀರಾಮಕೃಷ್ಣರು ಹಾಡುತ್ತಿದ್ದ ಒಂದು ಬಂಗಾಳಿ ಹಾಡಿನಲ್ಲಿ ಈ ರೀತಿ ಹೇಳಿದೆ: **'ಮಾ ಅಭೇನ್ ಆರ್ ಅಮಿ ಆಛಿ; ಭಾವ್ನ ಕಿ ಆಛೇ ಅಮಾರ್'** – ಇದರ ಅರ್ಥ ಹೀಗೆ: 'ಜಗನ್ಮಾತೆ ನನ್ನೊಂದಿಗಿರುವಳು. ನಾನೇಕೆ ಚಿಂತಿಸಲಿ? ಅವಳು ಯಾವಾಗಲೂ ನನ್ನೊಂದಿಗೇ ಇರುವಳು. ಅವಳು ನನಗೆ ಉಣಿಸುವಳು, ನನ್ನನ್ನು ನೋಡಿಕೊಳ್ಳುವಳು. ನನಗಾವ ಚಿಂತೆಯೂ ಇಲ್ಲ , ಭಯವೂ ಇಲ್ಲ. ಕತ್ತಲು ಕವಿದಾಗ ನನಗೆ ಭಯವಾಗುವುದು — 'ಏನಾಯಿತು? ಇನ್ನು ಏನಾಗುವುದು?' ಎಂದು. ಆಗ ಅವಳ ಮೃದುಹಸ್ತ ಬಳಿಗೆ ಬರುವುದು; ಆಕೆ ನನ್ನ ಕೈ ಹಿಡಿದಿರುವಳೆಂಬ ಸಾಂತ್ವನವನ್ನು ಅವಳು ನೀಡುವಳು. ನನಗೇನೂ ಭಯವಿಲ್ಲ.'

ಶ್ರೀರಾಮಕೃಷ್ಣರು ಭಜನೆಯ ರೂಪದಲ್ಲಿ ಈ ಭಾವವನ್ನು ಹೊಮ್ಮಿಸುತ್ತಿದ್ದುದು ಹೀಗೆ.

ಈ ದೇಹದ ಹಿಂದೆ ಇನ್ನೇನೋ ಇದೆ – ಅದು ಶಾಶ್ವತವೂ ಅನಂತವೂ ಆಗಿದೆ. ಅವನು ಭಗವಂತನೇ ಆಗಿದ್ದಾನೆ. ಸಾಮಾನ್ಯ ವಾಗಿ ನಾವು ದೇವರನ್ನು ಕುರಿತು ಹೀಗೆ ಭಾವಿಸುವುದಿಲ್ಲ. ಅವನು ದೂರ ಆಕಾಶದಲ್ಲೋ, ದೇವಾಲಯದಲ್ಲೋ, ಮೂರ್ತಿಯಲ್ಲೋ ಇದ್ದಾನೆಂದೇ ಭಾವಿಸುತ್ತೇವೆ. ಅವನು ನಮ್ಮ ಅಂತರಂಗದಲ್ಲಿರುವ ಆತ್ಮನೇ ಆಗಿದ್ದಾನೆ; ಒಂದು ಮಾಲೆಯನ್ನು ಪೋಣಿಸುವ ದಾರದಂತೆ ನಮ್ಮ ಅಂತರ್ಯಾಮಿಯಾಗಿದ್ದಾನೆ. ಇದನ್ನು ನಾವು ಮರೆಯು ತ್ತೇವೆ. ಗೀತೆಯಲ್ಲಿ ದೇವರನ್ನು ಹೀಗೆ ವರ್ಣಿಸಲಾಗಿದೆ: **'ಸೂತ್ರೇ ಮಣಿಗಣಾ ಇವ'** – 'ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟ ಹಾಗೆ ಇದೆಲ್ಲವೂ ನನ್ನಲ್ಲಿ ಪೋಣಿಸಲ್ಪಟ್ಟಿವೆ.' ಆಧ್ಯಾತ್ಮಿಕ ಸಾಧನೆ ಮತ್ತು ಧ್ಯಾನದ ಮೂಲಕ ನಾವು 'ಈ ದಾರವು ಶುದ್ಧ ಚೈತನ್ಯವಾಗಿದೆ, ಏಕಮೇವಾದ್ವಿತೀಯವಾಗಿದೆ, ಪ್ರಪಂಚದ ಎಲ್ಲ ವಸ್ತುಗಳಲ್ಲೂ ಹರಿದಾಡುತ್ತದೆ' ಎಂದು ಅದರ ಸ್ವಭಾವವನ್ನರಿಯಲು ಯತ್ನಿಸು ತ್ತೇವೆ. ಅದು ದಿವ್ಯವಾದುದು. ಇಂತಹ ಅಂತರ್ಮುಖಿಯಾದ ಸಾಧನೆಗಳಿಂದ ಆ ಭಗವಂತನನ್ನು ನಾವು ಸಮೀಪಿಸಬಹುದು. ಅದು ನಮ್ಮ ಸಹಜವಾದ ದೈನಂದಿನ ಬದುಕಿನಲ್ಲೂ ದಿವ್ಯತೆಯ ಅನುಭವವನ್ನು ನೀಡುವುದು. ಕೆಲಸಗಳ ನಡುವೆ ನಾವು ದೇವರ ಹೆಸರನ್ನು ಪುನರಾವರ್ತಿಸುತ್ತಿದ್ದರೆ ಅದು ನಮಗೆ ಹೊಸ ಶಕ್ತಿ ನೀಡು ವುದು. ಕೆಲಸ ಮಾಡುವಾಗ, ಉದಾಹರಣೆಗೆ ನೆಲ ಗುಡಿಸುವುದು ಇತ್ಯಾದಿ ಯಾವುದೇ ಕೆಲಸವನ್ನು ಮಾಡುತ್ತಿದ್ದರೂ, ನಡುನಡುವೆ 'ಶಿವ, ಶಿವ' ಎಂದು ಉಚ್ಚರಿಸಬೇಕೆಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ನಿಮ್ಮಲ್ಲಿರುವ ಶಿವನ ಸ್ವಭಾವವನ್ನು ನೆನಪಿಗೆ ತಂದು ಕೊಳ್ಳಿ. 'ಶಿವ, ಶಿವ' ಎಂದು ಉಚ್ಚರಿಸುವುದು ಆಧ್ಯಾತ್ಮಿಕ ಸಾಧ ನೆಯೇ ಆಗಿದೆ. ಉದಾಹರಣೆಗೆ, ನಿಮಗೆ ಕೋಪ ಬಂದಾಗ ಸುಮ್ಮನೆ 'ಶಿವ, ಶಿವ' ಎಂದು ಉಚ್ಚರಿಸಿ. ನಿಮ್ಮ ಕೋಪ ಮಾಯವಾಗುವುದು. ಕಠಿಣ ಸಂದರ್ಭಗಳಲ್ಲಿ ಮನಸ್ಸಿಗೆ ತಂದುಕೊಳ್ಳುವ 'ಆಧ್ಯಾತ್ಮಿಕ ಕಷಾಯ' ಎಂದೇ ಇದಕ್ಕೆ ಹೆಸರು. ಇದೆಲ್ಲವೂ ಆಧ್ಯಾತ್ಮಿಕ ಸಾಧನೆ ಯಾಗುತ್ತದೆ. ಆಧ್ಯಾತ್ಮಿಕ ಸಾಧನೆಯೆಂದರೆ ನಾವೆಲ್ಲ ಋಷೀಕೇಶಕ್ಕೆ ಹೋಗಬೇಕೆಂದು ಅರ್ಥವಲ್ಲ. ನಿಮ್ಮ ಮನೆಯಲ್ಲಿಯೇ, ನಿಮ್ಮ ದೈನಂದಿನ ಜೀವನದ ನಡುವೆಯೇ ನೀವು ಸಾಕಷ್ಟು ಆಧ್ಯಾತ್ಮಿಕ ಸಾಧನೆ ಮಾಡಬಹುದು. ಇಂತಹ ಅಂತರ್ಮುಖಿಯಾದ ಸಾಧನೆ ಅಗತ್ಯ. ಬಸ್ಸಿಗಾಗಿ ನಾನು ಹತ್ತು ನಿಮಿಷ ಕಾಯುತ್ತ ನಿಲ್ಲಬೇಕಾಗು ತ್ತದೆ. ಅದರಿಂದ ನನಗೆ ಉದ್ವೇಗವೇಕೆ ಉಂಟಾಗಬೇಕು? ನಾನು ಉದ್ವೇಗಕ್ಕೊಳಗಾಗುವುದರಿಂದ ಬಸ್ಸು ಬೇಗ ಬರುವುದಿಲ್ಲ. ಆದ್ದರಿಂದ ನಾನು ಶಾಂತನಾಗಿರುತ್ತೇನೆ, ಅಷ್ಟು ಸಮಯದೊಳಗಾಗಿ ಎಷ್ಟು ಸಾಧ್ಯವೋ ಅಷ್ಟು ಅಂತರ್ಮುಖತೆ ನನ್ನೊಳಗೆ ಬಂದುಬಿಡುತ್ತದೆ. ಹೀಗೆ ದಿನವೆಲ್ಲವೂ ಸ್ವಲ್ಪ ಸ್ವಲ್ಪವೇ ಅಂತರ್ಮುಖವಾಗಿರುವುದ ರಿಂದ ಬೇಕಾದಷ್ಟು ಆಧ್ಯಾತ್ಮಿಕ ಸಾಧನೆಯಾಗುವುದು. ನಮ್ಮ ಜೀವನವನ್ನು ನಾವು ಹೀಗೆ ರೂಪಿಸಿಕೊಳ್ಳಬೇಕು.

ಒಂದು ಸಲ ನಾನು ಅಮೆರಿಕದ ಕ್ಲೀವ್‌ಲ್ಯಾಂಡನ ಒಂದು ವೃದ್ಧಾಶ್ರಮದಲ್ಲಿ ಭಾಷಣ ಮಾಡಿದ್ದೆ. ಅದನ್ನು ನಡೆಸುತ್ತಿದ್ದ ಇಬ್ಬರು ಹೆಣ್ಣುಮಕ್ಕಳು ನನ್ನ ಬಳಿಗೆ ಓಡುತ್ತ ಬಂದು, ''ಸ್ವಾಮೀಜಿ, ದಯವಿಟ್ಟು ನಮ್ಮ ವೃದ್ಧಾಶ್ರಮಕ್ಕೆ ಭೇಟಿಕೊಡಿ'' ಎಂದರು. ಅಂತೆಯೇ ನಾನು ವಿಮಾನ ನಿಲ್ದಾಣದಿಂದ ನೇರ ವೃದ್ಧಾಶ್ರಮಕ್ಕೆ ಹೋದೆ. ಅದು ನನ್ನ ಮೊದಲ ಅನುಭವ. ಅಲ್ಲಿ ತುಂಬಾ ದೊಡ್ಡ ದೊಡ್ಡ ವ್ಯಕ್ತಿಗಳು ವಾಸಿಸುತ್ತಿದ್ದರು. ಆದರೆ ಅದು ತೀರ ಜಡವಾದ ಬದುಕು, ಅಲ್ಲೇನೂ ಆನಂದ ಕಂಡುಬರಲಿಲ್ಲ. ಸಭಾಭವನದಲ್ಲಿ ೮೦ ಕುರ್ಚಿಗಳು ಹಾಗೂ ೧೮ ಗಾಲಿಕುರ್ಚಿಗಳಿದ್ದವು. ಎಷ್ಟು ಜನ ಸಭಿಕರು ಬರಬಹುದೆಂದು ಆ ಸಭೆಯನ್ನು ಏರ್ಪಡಿಸಿದವರಿಗೆ ತಿಳಿದಿರಲಿಲ್ಲ. ಆದರೆ ಏನೋ ಅದೃಷ್ಟ, ಬಹುತೇಕ ಎಲ್ಲರೂ ಅಂದು ಬಂದುಬಿಟ್ಟಿದ್ದರು. ಸಾಮಾನ್ಯವಾಗಿ ಅವರು ತಮ್ಮ ಕೋಣೆಯನ್ನು ಬಿಟ್ಟು ಹೊರಬರುವಂತೆ ಮಾಡುವುದೇ ಅತ್ಯಂತ ಕಷ್ಟದಾಯಕ ಕೆಲಸವಾಗಿತ್ತು. ಆದರೂ ಅಂದೇಕೋ ಎಲ್ಲರೂ ಬಂದರು. ಅಲ್ಲಿ ಕುಳಿತಿದ್ದ ನನ್ನನ್ನು ಅವರು ಪರಿಚಯ ಮಾಡಿಕೊಟ್ಟರು. ವೃದ್ಧಾಪ್ಯ ದಲ್ಲಿ ಜೀವನವನ್ನು ಆನಂದವಾಗಿ ಮಾಡಿಕೊಳ್ಳುವುದು ಹೇಗೆ ಎಂಬ ವಿಷಯದ ಬಗ್ಗೆ ನಾನು ಸುಮಾರು ನಲುವತ್ತು ನಿಮಿಷಗಳ ಕಾಲ ಮಾತನಾಡಿದೆ. ಅವರಿಗೆ ಇದೊಂದು ದೊಡ್ಡ ಸವಾಲಾಗಿತ್ತು. ಆ ಇಬ್ಬರು ಹೆಣ್ಣುಮಕ್ಕಳು (ಅವರಲ್ಲಿ ಒಬ್ಬಾಕೆ ಬಿಳಿಯರ ಹೆಂಗಸು, ಇನ್ನೊಬ್ಬಳು ಕಪ್ಪು ವರ್ಣದವಳು) ಅನಂತರ ಏನು ಹೇಳಿದರು ಗೊತ್ತೆ? ''ಸ್ವಾಮೀಜಿ, ನಮ್ಮ ಈ ಸಂಸ್ಥೆಯ ಬಹುಪಾಲು ಜನರು ಹೀಗೆ ೪೦ ನಿಮಿಷ ಒಂದೆಡೆ ಕುಳಿತು ಭಾಷಣ ಕೇಳಿದ್ದನ್ನು ನಾವು ಹಿಂದೆಂದೂ ನೋಡಿಲ್ಲ. ಅಲ್ಲಿರಬೇಕೆಂದು ಯಾವತ್ತೂ ಅನ್ನಿಸುವು ದಿಲ್ಲ. ಆದರೆ ಈಗ ಅವರಿಗೆ ಹೊಸತೇನೋ ಸಿಕ್ಕಿದೆ; ಹೊಸತೇ ನನ್ನೋ ಅವರು ಅರಿತುಕೊಂಡಿದ್ದಾರೆ.'' ಆಗ ನಾನೆಂದೆ, ''ನೀವು ಆನಂದದಿಂದ ಇರಲು ಏನನ್ನು ಬೇಕಾದರೂ ಸರ್ಕಾರ ಮಾಡ ಬಲ್ಲದು. ಆದರೆ ಆನಂದವಾಗಿರಬೇಕೆಂದು ಇಚ್ಛೆ ನಿಮಗೇ ಇಲ್ಲ ದಿದ್ದರೆ, ನೀವೆಂದೂ ಆನಂದವಾಗಿರಲಾರಿರಿ. ಇಲ್ಲೇ ವೇದಾಂತ ಬಂದುಬಿಡುತ್ತದೆ. ನಮ್ಮೆಲ್ಲರಲ್ಲೂ ದಿವ್ಯತೆಯ ಕಿಡಿಯಿದೆ. ನೀವು ಈ ಸತ್ಯವನ್ನು ಅರಿತುಕೊಳ್ಳಬೇಕು. ಆಗ ಈ ಜೀವನವೆಲ್ಲವೂ ಆನಂದಮಯವಾಗುವುದು.'' ಅವರ ಬಳಿ ಎಲ್ಲ ಸೌಕರ್ಯ, ಸವ ಲತ್ತುಗಳೂ ಇವೆ; ಆದರೆ ಆನಂದದಿಂದಿರಬೇಕೆಂಬ, ಅದನ್ನು ಹೊಂದಿ ತೃಪ್ತಿಯನ್ನು ಗಳಿಸಬೇಕೆಂಬ ಇಚ್ಛಾಶಕ್ತಿಯಿಲ್ಲ ಅಷ್ಟೆ. ಆದ ಕಾರಣವೇ ಅವರು ಮಾನವ ಜೀವನದ ನೀರಸವಾದ, ಜಡವಾದ ಅವಸ್ಥೆಯನ್ನು ಹೊಂದಿದ್ದಾರೆ. ನನಗೆ ಈ ಅನುಭವ ಹಲವು ಸಂಗತಿ ಗಳನ್ನು ಕಲಿಸಿತು. ನಮ್ಮ ಕೆಲವು ವೇದಾಂತ ಭಕ್ತರು ನ್ಯೂಯಾರ್ಕ್ ಬಳಿ ಒಂದು ವೃದ್ಧಾಶ್ರಮವನ್ನು ಆರಂಭಿಸಬೇಕೆಂದಿದ್ದಾರೆ. ಆ ಭಕ್ತ ರಿಗೆ ನಾನು ಹೇಳಿದೆ, ''ಇದನ್ನು ಮಾಡಿದ್ದೇ ಆದರೆ, ನೀವು ಅಮೆರಿಕಾಗೆ ಅದ್ಭುತವಾದ ಒಂದು ಕೊಡುಗೆಯನ್ನೇ ಕೊಡುತ್ತೀರಿ. ಆನಂದದ ಭಾವ ಅದಾಗಿರುತ್ತದೆ.'' ನಿಮಗೆಲ್ಲರಿಗೂ ನನ್ನ ಪ್ರೀತಿ ಹಾಗೂ ಶುಭಾಶಯಗಳು. ನಮಸ್ಕಾರ. *(ಸಮಾಪ್ತಿ)*

# ಭಾರತೀಯ ನಾರಿಯರ ಆದರ್ಶಗಳು

ಡಾ. ಕೆ.ಎಲ್. ಪ್ರಸನ್ನಾಕ್ಷೀ

ಸ್ತ್ರೀಯನ್ನು ಜಗನ್ಮಾತೆಯ ಪ್ರಕಟರೂಪವೆಂದು ಪೂಜಿಸುವ ಸಂಸ್ಕೃತಿ ನಮ್ಮದು. ಆಧುನಿಕತೆಯ ಹಲವು ವಿಚಾರಗಳ ಗೊಂದಲದಲ್ಲಿ ಸಿಲುಕಿರುವ ಇಂದಿನ ತರುಣಿಯರು ಈ ಸಂಸ್ಕೃತಿಯಲ್ಲಿರುವ ಶ್ರೇಷ್ಠ ಮೌಲ್ಯ, ಗುಣ, ಚಾರಿತ್ರ್ಯಗಳನ್ನು ಅರಿತುಕೊಳ್ಳುವ ಅಗತ್ಯವಿದೆ. ಇಂಥ ಗುಣಗಳ ಸಾಕಾರ ರೂಪವೆಂಬಂತೆ ಬದುಕಿದ ಶ್ರೇಷ್ಠ ಭಾರತೀಯ ನಾರಿಯರ ಬದುಕನ್ನು ತಿಳಿಯುವ ಮೂಲಕ ಇದನ್ನು ಸಾಧಿಸಬಹುದು. ಭಾರತೀಯ ಶ್ರೇಷ್ಠ ಮಹಿಳೆಯರ ಜೀವನ, ಆದರ್ಶಗಳನ್ನು ಇಲ್ಲಿ ಪರಿಚಯಿಸುವ ಲೇಖಕಿ, ಮೈಸೂರು ಮಹಾರಾಣಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಸಂಸ್ಕೃತ ವ್ಯಾಸಂಗ, ಶಾಸ್ತ್ರ ಹಾಗೂ ಆಧ್ಯಾತ್ಮಿಕ ಕೃತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಅವರು ಮೈಸೂರು ಆಶ್ರಮದ ಭಕ್ತರು.

ಎಳ್ಳು ಒಂದು ಅತ್ಯಂತ ಸಣ್ಣ ಕಾಳು. ಅಷ್ಟು ಸಣ್ಣದರ ಒಳಗೆ ಹೊರಗೆ ಕಣಕಣದಲ್ಲಿ ಒಂದು ಕಣದ ಕಿಂಚಿತ್ ಭಾಗವನ್ನೂ ಬಿಡದೆ ಜಿಡ್ಡು ವ್ಯಾಪಿಸಿಕೊಂಡಿರುತ್ತದೆ. ಅಂತೆಯೇ ಇಷ್ಟು ಬೃಹದ್ಗಾತ್ರದಲ್ಲಿ ವಿಸ್ತಾರವಾಗಿ ಇರುವ ವಿಶ್ವಾಂಡದ ಮಣ್ಣಿನ ಕಣಕಣದಲ್ಲೂ, ಜಲದ ಬಿಂದು ಬಿಂದುವಿನಲ್ಲೂ, ಗಿಡ ಮರ ಬಳ್ಳಿ ಬೆಟ್ಟ ಗುಡ್ಡ ನದ-ನದಿಗಳ ನರನರಗಳಲ್ಲೂ ಯಾರಿಂದ ಇದು ಇಷ್ಟು ಬೃಹತ್ತಾಗಿ ವಿಕಾಸಗೊಂಡಿದೆಯೋ ಆ ಪರಮಾತ್ಮನ ಅಸ್ತಿತ್ವ ಇದೆ. ಅದನ್ನು ಅಂತರಂಗದೊಳಗೆ ಕಂಡು ಅನುಭವಿಸಿ ಪರಮಾನಂದವನ್ನನುಭವಿಸಿದ ಋಷಿಗಳು ನಿಂತಲ್ಲಿ ಕುಳಿತಲ್ಲಿ, ಕಣ್ಣು ಹಾಯಿಸಿದಲ್ಲಿ, ಕೈಚಾಚಿದಲ್ಲಿ ಕಾಲಿಟ್ಟಲ್ಲಿ ಭಗವದ್ಭಾವಭರಿತರಾಗಿದ್ದಾರೆ, ರೋಮಾಂಚಗೊಂಡು ಮೈಮರೆತಿದ್ದಾರೆ. ಇಂತಹ ಆನಂದಘನವಾದ ಜೀವನ ಎಲ್ಲರಿಗೂ ದೊರಕಲಿ ಎಂಬ ಹಂಬಲದಿಂದ ತಮ್ಮ ಅನುಭವಗಳನ್ನು ಶಬ್ದರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ಆ ಸಾಹಿತ್ಯವೇ ವೇದ. ಈ ವೇದ ಬೋಧಿಸಿದ ಪರಮಾನಂದಾನುಭೂತಿಯಲ್ಲಿ ಲೀನರಾಗಿ ದಿವ್ಯವೂ ಭವ್ಯವೂ ಪರಮಪಾವನವೂ ಆದ ಬದುಕನ್ನು ಬದುಕಿದ ಮಹಾಮಹಿಮರು ಉದಿಸಿದ ನಾಡು ಭಾರತ. ಅಣುವಿಗೆ ಅಣುವೂ ಮಹತ್ತಿಗೂ ಮಹತ್ತೂ ಆದ ತತ್ತ್ವಜ್ಞಾನ ಅನುಭವಗಳ ಕಾರಣ ಸಮಸ್ತರಲ್ಲೂ ಸಮಸ್ತದಲ್ಲೂ ಆ ಪರತತ್ತ್ವವನ್ನು ಕಾಣುತ್ತಾ ಸಕಲಜೀವಗಳಲ್ಲೂ ಕರುಣೆ ಪ್ರೀತಿ ಅದರ ಸಮಭಾವ ಹೊಂದಿದ ಯೋಗಿಗಳ ನಾಡು ಭಾರತ. ಗ್ರಾಮ ಗ್ರಾಮದ, ಊರು ಊರಿನ, ನಗರ ನಗರದ ಬಾವಿ ಕೆರೆ ಕುಂಟೆ ನದಿನದಿಗಳೂ ಪಾವನತ್ವಗುಣವುಳ್ಳವುಗಳಾಗಿ ಮಿಂದವರಿಗೆ ಪರಮಧಾಮವನ್ನು ಕರುಣಿಸಬಲ್ಲ ತೀರ್ಥಗಳ ನಾಡು ಭಾರತ.

ಆದುದರಿಂದಲೇ –

**ಭಾತಿ ಸರ್ವೇಷು ವೇದೇಷು ರತಿಃ ಸರ್ವೇಷು ಜಂತುಷು ।**
**ತರಣಂ ಸರ್ವತೀರ್ಥಾನಾಂ ತೇನ ಭಾರತಮುಚ್ಯತೇ ॥**

— ಎಂದು 'ಭಾರತ' ಪದದ ವ್ಯುತ್ಪತ್ತಿ ಹೇಳುವರು.

ಇಂತಹ ಪರಮೋತ್ಕೃಷ್ಟವಾದ ಭವ್ಯಭಾರತದ ಮಹಿಮೆಯನ್ನು ದೇವತೆಗಳು ದೇವಸಭೆಯಲ್ಲಿ ಗಾನಮಾಡಿ, ತಮಗೂ ಆ ನಾಡಿನಲ್ಲಿ ಜನ್ಮದೊರಕಲೆಂದು ಭಾವಿಸುವರೆಂದು 'ವಿಷ್ಣುಪುರಾಣ' ತಿಳಿಸುತ್ತದೆ. ಭಕ್ತಾಗ್ರಣಿಗಳಾದ ಭಕ್ತಿರಸವನ್ನು ಮೂರೂ ಲೋಕಗಳಲ್ಲಿ ಪಸರಿಸಲು ನಿರಂತರ ಸಂಚರಿಸುವ ನಾರದರೂ ಪಶುಪಕ್ಷಿ ಕೀಟ ಮರ ಕಲ್ಲು, ಕೊನೆಗೆ ಉದುರಿ ಹೋದ ಒಂದು ತರಗೆಲೆಯಾಗಿಯಾದರೂ ಭಾರತದಲ್ಲಿ ತನಗೆ ಜನ್ಮವಿರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸಿರುವರು.

ಭಾರತದಲ್ಲಿ ಆದ್ಯಂತವಾಗಿ ಎಲ್ಲಿಂದ ಎಲ್ಲಿಗೆ ಹೋದರೂ ಭಗವತ್ಕೇಂದ್ರಿತ ಬದುಕು, ಭಗವನ್ಮಯ ಬದುಕು. ಬೆಳಿಗ್ಗೆ ಹಾಸಿಗೆಯಲ್ಲಿ ನಿದ್ದೆಯಿಂದ ಎಚ್ಚರಗೊಳ್ಳುವಾಗ ಆರಂಭವಾಗುವ ಭಗವತ್ ಸ್ಮರಣೆ ವ್ಯಕ್ತಿಯ ದಿನದ ಪ್ರತಿ ಚಟುವಟಿಕೆಯಲ್ಲೂ ಮುಂದುವರಿದು, ರಾತ್ರಿ ಮಲಗುವಾಗ ಭಗವತ್ ಸ್ಮರಣೆಯೊಡನೆ ಸಂಪನ್ನಗೊಳ್ಳುವುದು. ಈ ಪರಿಯ ಜೀವನ ನಡೆಸುವುದರಲ್ಲಿ ಮಹಿಳೆಯರ ಪಾತ್ರ ವಿಶಿಷ್ಟವಾದುದು. ವಿವಾಹಕಾಲದಲ್ಲಿ ಪತಿಯಾಗುವವನು ವಧುವಿನ ಕರ ಹಿಡಿಯುವಾಗ, 'ಮುದುಕನಿಗೆ ಊರುಗೋಲು ಹೇಗೋ ಹಾಗೆ (ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾ ಸಃ) ನಿನ್ನ ಕೈ ಹಿಡಿಯುವೆನು' ಎಂದು ಹೇಳುವನು. ಅದರಂತೆ ದಾರಿ ತಪ್ಪುವಾಗ, ಜಾರಿ ಬೀಳುವಾಗ, ಭಯಭೀತಿಯುಂಟಾದಾಗ ಕೈಯಲ್ಲಿ ಹಿಡಿದ ದಂಡ ಹೇಗೆ ಸಹಾಯಕವೋ ಹಾಗೆ; ಮಾಯೆಯ ಪ್ರಭಾವಕ್ಕೆ ಸಿಲುಕಿ ಸಂಸಾರಜಾಲದಲ್ಲಿ ಮುಳುಗಿ ಹೋಗುತ್ತಿರುವೆನೆಂಬುವಾಗ ಕಾಮಕ್ರೋಧಾದಿ ಅರಿಷಡ್ವರ್ಗಗಳ ಆಕ್ರಮಣದಿಂದ ನ್ಯಾಯಾನ್ಯಾಯ ಧರ್ಮಾಧರ್ಮ ಅರಿಯದೆ ತಪ್ಪು ಹೆಜ್ಜೆ ಇಡುವಾಗ ಸಹಕಾರಿಣಿಯಾಗಿ ನಿಂತು ಕೈಹಿಡಿದು ಧರ್ಮಮಾರ್ಗದಲ್ಲಿ ನಡೆಸುವವಳು, ಗುರಿಮುಟ್ಟಿಸುವಳು ಸ್ತ್ರೀ (ಪತ್ನಿ). ಲಯಕಾಲದಲ್ಲಿ ತನ್ನಲ್ಲಿ ತಾನು ಲೀನನಾಗಿರುವ ಭಗವಂತನು ಸೃಷ್ಟಿಕಾರ್ಯ ಆರಂಭಿಸಬೇಕೆಂದರೆ ಜಗನ್ಮಾತೆಯ ಸಹಕಾರ ಬೇಕು. ಆದರಿಂದಲೇ ಶ್ರೀ ಶಂಕರರು ತಮ್ಮ 'ಸೌಂದರ್ಯ ಲಹರೀ'ಯಲ್ಲಿ, **'ಶಿವಃ ಶಕ್ತ್ಯಾ ಯುಕ್ತೋ ಯದಿ ಭವತಿ ಪ್ರಭವತಿ'** ಎಂದಿದ್ದಾರೆ. ಪರಮಾತ್ಮನು ಸೃಷ್ಟಿಕಾರ್ಯ ಸಾಮರ್ಥ್ಯವನ್ನು ಈಕೆಯ ಸಹಾಯದಿಂದಲೇ ಪಡೆಯುತ್ತಾನೆ.

## ಅಧ್ಯಾತ್ಮ ನಿಧಿ – ಬ್ರಹ್ಮವಾದಿನಿಯರು

ಇಂತಹ ಜಗನ್ಮಾತೆಯ ಪ್ರತಿನಿಧಿಗಳಾದ ಸ್ತ್ರೀಯ ಪರಮ ಆದರ್ಶ ಮಾತೃತ್ವ. ವಾತ್ಸಲ್ಯ, ತಿತಿಕ್ಷೆ, ತ್ಯಾಗ ಇವೇ ಮೊದಲಾದವು ಸ್ತ್ರೀಸಹಜ ಗುಣವಾಗಿದೆ. ಇವುಗಳೊಡನೆ ಅಧ್ಯಾತ್ಮ ಸಾಧನೆಯ ಮೂಲಕ ಪರಮೋನ್ನತ ಜ್ಞಾನಸಿದ್ಧಿಯನ್ನು ಪಡೆದುಕೊಂಡ

ಮಹಿಳೆಯರ ಸಂಖ್ಯೆಯೇನೂ ಕಡಿಮೆ ಇಲ್ಲ. ಅಧ್ಯಾತ್ಮ ಜ್ಞಾನ ಎಂದ ಕೂಡಲೆ ಸರ್ವೇಸಾಧಾರಣವಾಗಿ ಎಲ್ಲ ಜನರ ಕಣ್ಮನಗಳಲ್ಲಿ ಸುಳಿಯುವವರು **ಗಾರ್ಗಿ** , **ಮೈತ್ರೇಯಿ**ಯರು.

ಬ್ರಹ್ಮಜ್ಞಾನದೊಡನೆ ಅವಿನಾಭಾವ ಸಂಬಂಧ ಪಡೆದಿರುವ ಜನಕರಾಜನ ಸಭೆ, ದೇಶದೇಶಗಳಿಂದ ಅಧ್ಯಾತ್ಮ ವಿದ್ಯಾಪ್ರವೀಣ ರಾದ ಘನ ವಿದ್ವಾಂಸರು ಬಂದು ನೆರೆದಿದ್ದಾರೆ. ಅಲ್ಲಿ ಅಧ್ಯಾತ್ಮ ವಿಚಾರದ ಘನ ಸಮಾಲೋಚನೆ ಜರುಗಲಿದೆ. ಪ್ರತಿಯೊಬ್ಬರೂ ತಮ್ಮ ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಸಭೆಯ ಅಧ್ಯಕ್ಷೆ ಗಾರ್ಗಿ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲಾಗದೆ ಅವರು ಮೌನ ತಳೆದಿದ್ದಾರೆ. ಆಗ ಬಂದರು ಯಾಜ್ಞವಲ್ಕ್ಯರು; ಗಾರ್ಗಿಯ ಎಲ್ಲಾ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನಿತ್ತು ಅವಳಿಂದ 'ಪರಮ ವೇದಾಂತವಿಜ್ಞಾನಿ' ಎಂಬ ಪ್ರಶಂಸಾವಚನ ಪ್ರಮಾಣಪತ್ರವನ್ನು ಪಡೆದುಕೊಂಡರು.

ಅಂತೆಯೇ ಯಾಜ್ಞವಲ್ಕ್ಯರ ಪತ್ನಿಯರಲ್ಲಿ ಒಬ್ಬಳಾದ **ಮೈತ್ರೇಯಿ** 'ಅಮೃತತ್ವಸ್ಯ ತು ನಾಶಾಸ್ತಿವಿತ್ತೇನ' (ಹಣದಿಂದ ಅಮರತ್ವವನ್ನು ಪಡೆಯುವ ಜ್ಞಾನವಾಗಲೀ ಅಮರತ್ವವಾಗಲೀ ಲಭಿಸದು) ಎಂಬುದನ್ನು ತನ್ನ ಪತಿ ಯಾಜ್ಞವಲ್ಕ್ಯರಿಂದ ತಿಳಿದು, ಅವರು ಪಡೆದಿರುವ ಆತ್ಮಜ್ಞಾನವನ್ನೇ ಅವರಿಂದ ಅವಳು ಬಯಸಿ ದಳು, ಮತ್ತು ಅದನ್ನು ಆಕೆ ಪಡೆದುಕೊಂಡಳು.

ಇವರ ಸಾಲಿನಲ್ಲಿ ರಾಜಾ ಕುವಲಾಶ್ಯನ ಪತ್ನಿ **ಮದಾಲಸೆ**ಯೂ ಸೇರುತ್ತಾಳೆ. ಸ್ವತಃ ಅಧ್ಯಾತ್ಮಜ್ಞಾನಿಯಾದ ಈಕೆ ತನಗೆ ಹುಟ್ಟಿದ ಮಕ್ಕಳನ್ನು ತೊಟ್ಟಿಲಿಗೆ ಹಾಕಿ ತೂಗುವಾಗ ಹಾಡಿದ ಹಾಡುಗಳು ಅಧ್ಯಾತ್ಮಜ್ಞಾನರಸಪೂರ್ಣವಾದವು. ಅವು ತತ್ತ್ವಬೋಧಾತ್ಮಕ ವಾಗಿದ್ದು, ಆ ಹಾಡುಗಳನ್ನು ಕೇಳಿ ಬೆಳೆದ ಅವಳ ಮಕ್ಕಳು ಅಮ್ಮ ಮದಾಲಸೆಯಿಂದ ಜ್ಞಾನ ಪಡೆದು, ಅಧ್ಯಾತ್ಮವಿದ್ಯೆಯ ಜಿಜ್ಞಾಸು ಗಳಾಗಿ ಭವವನ್ನು ದಾಟಿಹೋದ ವಿಚಾರವನ್ನು ಮಾರ್ಕಂಡೇಯ ಪುರಾಣ ತಿಳಿಸುತ್ತದೆ. ಆಕೆಯ ಜೋಗುಳದ ಹಾಡುಗಳು ಪ್ರಸಿದ್ಧ ವಾಗಿವೆ.

ರಾಜಾ ಶಿಖಿಧ್ವಜನ ಪತ್ನಿ **ಚೂಡಾಲೆ**ಯು ಸ್ವಪ್ರಯತ್ನದಿಂದ ಆತ್ಮಜ್ಞಾನವನ್ನು ಸಾಧಿಸಿಕೊಂಡು, ತನ್ನ ಪತಿಯನ್ನೂ ಆ ಮಾರ್ಗ ದಲ್ಲಿ ಪ್ರೇರೇಪಿಸಿ, ಆತನೂ ಆತ್ಮಜ್ಞಾನ ಸಂಪನ್ನನಾಗುವಂತೆ ಮಾಡಿದ ವಿಚಾರವನ್ನು ಯೋಗವಾಸಿಷ್ಠವು ವಿಸ್ತಾರವಾಗಿ ವಿವರಿ ಸುತ್ತದೆ.

ಬ್ರಹ್ಮಜ್ಞಾನ ಎಂದರೆ ಜನಕ, ಜನಕ ಎಂದರೆ ಬ್ರಹ್ಮಜ್ಞಾನ. ಅಂತಹ ಜನಕನ ಆಸ್ಥಾನಕ್ಕೆ ಪ್ರಧಾನ ಎಂಬ ರಾಜರ್ಷಿಯ ಮಗಳಾದ **ಸುಲಭಾ** ಎಂಬ ಬ್ರಹ್ಮವಾದಿನಿಯು ಹೋಗಿ, ಬ್ರಹ್ಮ ವಿದ್ಯೆಯ ವಿಚಾರದಲ್ಲಿ ಚರ್ಚೆಮಾಡಿ, ಸ್ತ್ರೀ-ಪುರುಷ ಎಂಬ ಭೇದದ ನೆಲೆಯಲ್ಲಿದ್ದ ಜನಕನ ಅಜ್ಞಾನವನ್ನು ದೂರ ಮಾಡಿದ ಗಾಥೆಯನ್ನು ಮಹಾಭಾರತದ ಶಾಂತಿಪರ್ವ ತಿಳಿಸುತ್ತದೆ. ಅದೇ ಪರ್ವದಲ್ಲಿ ದೇವಲ ಮಹರ್ಷಿಯ ಮಗಳಾದ **ಸುವರ್ಚಲೆ** ಶ್ವೇತ ರೇಯ ಎಂಬ ಜ್ಞಾನಿಯೊಡನೆ 'ಜ್ಞಾನಿಗೆ ಪುರುಷಾರ್ಥಸಿದ್ಧಿ ಹೇಗೆ?' ಎಂಬ ವಿಚಾರದಲ್ಲಿ ಅಧ್ಯಾತ್ಮ ಸಂವಾದ ನಡೆಸಿದ ವಿಚಾರ ನಿರೂಪಿತವಾಗಿದೆ.

**ಋಗ್ವೇದ**ವಂತೂ ವಿಶ್ವಾವರಾ, ಅಪಾಲಾ, ಗೋಧಾ, ಘೋಷಾ, ಲೋಪಾಮುದ್ರಾ, ಶಾಶ್ವತೀ, ರೋಮಶಾ, ನಿವಾವರೀ ಮೊದ ಲಾದ ಅನೇಕ ಮಂತ್ರದ್ರಷ್ಟ್ರಿಯರಾದ ಋಷೀಕೆಯರನ್ನು ಪರಿ ಚಯಿಸುತ್ತದೆ. ಇವರೆಲ್ಲರ ಸೂಕ್ತಗಳು, ಮಂತ್ರಗಳ ಒಂದೆರಡು ಭಾಗಗಳು ಅಲ್ಲಿ ಇವೆ. ಇವರ ಮಧ್ಯದಲ್ಲಿ ಆಂಭೃಣ ಮಹರ್ಷಿಯ ಮಗಳಾದ **ಆಂಭೃಣೀ ವಾಕ್** ಅತ್ಯುನ್ನತ ಅಧ್ಯಾತ್ಮಭಾವವನ್ನನು ಭವಿಸಿದ ಮಹಾ ಅನುಭಾವಿಯಾಗಿದ್ದಾಳೆ. ಸೃಷ್ಟಿ ವಿಕಾಸ ಕ್ರಮ ದಲ್ಲಿ ಉಂಟಾದ ಮಿತ್ರ ವರುಣಾದಿ ಸಕಲ ದೇವಾದಿದೇವತೆಗಳಿಂದ ಹಿಡಿದು ಸೃಷ್ಟಿಸಲಾದ ಸಮಸ್ತ ವಿಶ್ವದ ಅಣುಅಣುವಿನಲ್ಲೂ ವ್ಯಾಪಿಸಿರುವ 'ಅಹಂ' ತತ್ತ್ವದ ಸರ್ವವ್ಯಾಪಕತೆಯನ್ನು ಆಕೆ ಅನುಭವಿಸಿದ್ದಾಳೆ. ಅನಂತರ ಕಾಲದಲ್ಲಿ ಶ್ರೀಶಂಕರಾಚಾರ್ಯರು ಪ್ರತಿಪಾದಿಸಿದ '**ಅಹಂ ಬ್ರಹ್ಮಾಸ್ಮಿ**' ಎಂಬ ತತ್ತ್ವದ 'ಅಹಂ' ಪದಾ ರ್ಥದ ಅನುಭವ ಈಕೆಯದು. ('ವಾಕ್' ಎಂಬುದು ರೂಪಕ ಶಬ್ದ, ಅದು ವ್ಯಕ್ತಿಯದಲ್ಲ; ಈ ಮಂತ್ರದಿಂದ ಪ್ರತಿಪಾದಿತವಾಗು ತ್ತಿರುವ ದೇವತೆ ಸರಸ್ವತೀ ಅಥವಾ ದೇವೀ — ಎಂದು ಮೊದ ಲಾಗಿ ವಿಮರ್ಶಕ ವಿದ್ವಾಂಸರು ಪ್ರತಿಪಾದಿಸಿದರೂ, ಅದು ಒಬ್ಬ ಋಷೀಕೆಯ ಹೆಸರು ಎಂದು ವೇದಸಾಹಿತ್ಯವೇ ತಿಳಿಸಿ, ಈ ಸೂಕ್ತದ ದ್ರಷ್ಟೀ ಆಂಭ್ರಣಿಯೇ ಎಂದು ತಿಳಿಸುತ್ತದೆ. ಇದನ್ನು 'ಅಹಂಗ್ರಹೋಪಾಸನ' ಮಂತ್ರಗಳು ಎಂದೂ ಕರೆಯುತ್ತಾರೆ. ಈಕೆಯ ಅನುಭವವು ಅಧ್ಯಾತ್ಮ ಅನುಭವದ ಅಂತಿಮ ನೆಲೆಯ ಪರಿಪೂರ್ಣತೆಯ ಸಾಕಾರವೇ ಆಗಿದೆ.)

**ಆಶ್ವಲಾಯನ ಗೃಹ್ಯಸೂತ್ರ**ವೂ ಗಾರ್ಗೀ, ವಾಚಕ್ನವೀ, ವಡವಾ, ಪ್ರಾತಿಥೇಯೀ ಮೊದಲಾದ ಅನೇಕ ಬ್ರಹ್ಮವಾದಿನಿಯರನ್ನು ಹೆಸ ರಿಸುತ್ತದೆ. ಕರ್ದಮ ಪ್ರಜಾಪತಿಯ ಪತ್ನಿ **ದೇವಹೂತಿ** ತನ್ನ ಮಗ ಕಪಿಲನಿಂದ ಆತ್ಮಜ್ಞಾನ ಪಡೆದು, ಸ್ವತಃ ಸಾಧನೆ ಮಾಡಿ ಪರಮ ಪದವಿ ಪಡೆದಳೆಂದು **ಭಾಗವತ ಪುರಾಣ** ತಿಳಿಸುತ್ತದೆ.

**ತ್ಯಾಗ, ತಿತಿಕ್ಷೆ:** ತ್ಯಾಗ ತಿತಿಕ್ಷಾ ಮಮತಾ ಗುಣಗಳ ಜೊತೆ ಜೊತೆಗೆ ನೆನಪಿಗೆ ಬರುವವರು, ತಾಯಿ **ಸೀತೆ.** ಎಂತೆಂತಹ ಕಷ್ಟ ವನ್ನು ಅಪಮಾನಗಳನ್ನು ದುಃಖಗಳನ್ನು ಆಕೆ ಅನುಭವಿಸಿದುದು, ಅಷ್ಟಾದರೂ ಯಾರೊಬ್ಬರ ಮೇಲೂ ಕೋಪ ನಿಂದೆ ಅವಹೇಳನದ ಮಾತಿಲ್ಲ, ಯಾರ ಮೇಲೂ ಕೋಪತಾಪವಿಲ್ಲ. ರಾವಣನ ಅಶೋಕ ವನದಲ್ಲಿ ತನ್ನನ್ನು ಸುತ್ತುಗಟ್ಟಿದ್ದ ಒಬ್ಬೊಬ್ಬ ರಾಕ್ಷಸಿಯ ವಿಕೃತ ಆಕಾರ ನೆನೆದರೆ ಸಾಕು ಜಂಘಾಬಲವೇ ಉಡುಗಿ ಹೋಗುತ್ತದೆ, ಉಸಿರೇ ಚಲಿಸುವುದಿಲ್ಲ, ಹೃದಯದ ಬಡಿತ ನಿಲ್ಲುತ್ತದೆ. ಜೊತೆಗೆ ಅವರ ಕರ್ಕಶಧ್ವನಿಯ ಕೆಟ್ಟ ಪದಗಳ ಪ್ರಯೋಗ, ಅಹಿತಕರ ಮಾತುಗಳು. ತನ್ನ ಬೆನ್ನೇರಿದರೆ ಇಂತಹ ವಾತಾವರಣದಿಂದ ಆ



ಸೀತಾದೇವಿ *(ಚಿತ್ರ : ರವಿವರ್ಮ)*

ಘಳಿಗೆಯಲ್ಲಿ ಮುಕ್ತಳನ್ನಾಗಿ ಮಾಡಿ ರಾಮನ ಪಾದ ಸೇರಿಸುವೆನೆಂದು ಹನುಮ ಹೇಳಿದಾಗ (ಪರಪುರುಷ ಸ್ಪರ್ಶ) ಅದು ತನ್ನ ಪಾತಿವ್ರತ್ಯಕ್ಕೆ ಭಂಗ ತರುವುದು, ತನ್ನ ಪತಿಯ ಕೀರ್ತಿಗೆ ಕಳಂಕ ತರುವುದು ಎಂದು ಆ ಸಲಹೆಯನ್ನು ಅಂಗೀಕರಿಸುವುದಿಲ್ಲ. ಆಕೆಯ ಸಹನಾಶಕ್ತಿಗೆ ಅನಂತ ಕೋಟಿ ನಮನಗಳು. ರಾಮರಾವಣರ ಯುದ್ಧವಾಗಿ ರಾಮನಿಗೆ ಜಯವಾದ ಮೇಲೆ ಸೀತೆಯನ್ನು ಆ ಪರಿ ಹಿಂಸಿಸಿದ ಒಬ್ಬೊಬ್ಬ ರಾಕ್ಷಸಿಯನ್ನು ತಾನೂ ಅದೇ ರೀತಿಯಲ್ಲಿ ಹಿಂಸಿಸಿ ಕೊಲ್ಲಲು ಅನುಮತಿ ಕೊಡಬೇಕೆಂದು ಹನುಮ ಸೀತೆಯನ್ನು ಕೇಳುವನು. ಆಗ ಆಕೆ, ''ಪಾಪ ಅವರದೇನು ತಪ್ಪು, ತಮ್ಮ ಒಡೆಯನ ಆಜ್ಞೆಯನ್ನು ಅವರು ಪಾಲಿಸಿದ್ದಾರೆ. ಅವರನ್ನು ಹಿಂಸಿಸಬೇಡ'' ಎಂದು ಆತನನ್ನು ಹಿಂಸಿಸದಂತೆ ತಡೆಯುತ್ತಾಳೆ. ಅಂತಹ ಕರುಣಾಮಯಿ, ಮಮತಾಮಯಿ ತಾಯಿ ಸೀತೆ. ಹನುಮಂತನಿಂದ ಹೆಸರು



ಸಾವಿತ್ರಿ *(ಚಿತ್ರ : ರವಿವರ್ಮ)*

ಮಾತ್ರ ಕೇಳಿ ತಿಳಿದಿದ್ದ ಸುಗ್ರೀವಾದಿಗಳಿಗೂ ಅವನ ಮೂಲಕ ಶುಭಾಶಯಗಳನ್ನು ಕ್ಷೇಮ ಸಮಾಚಾರ ವಿಚಾರಿಸಿದುದಾಗಿ ತಿಳಿಸಬೇಕೆಂದೂ ಹೇಳುವ ಆಕೆಯ ಸೌಜನ್ಯ, ವಾತ್ಸಲ್ಯ ಎಷ್ಟು ಘನವಾದುದು!

**ಸತ್ಯ-ಧೃತಿ:** ಕಷ್ಟ ಸಹನೆ ತಿತಿಕ್ಷೆ ಗುಣಗಳಿಗೆ ಆದರ್ಶವಾಗಿ **ಸಾವಿತ್ರೀ, ದಮಯಂತಿ**ಯರೂ ಕಣ್ಣ ಮುಂದೆ ಬರುತ್ತಾರೆ. ಆದರೆ ಸತ್ಯ-ಧೃತಿಗಳು ಅವರ ಪರಮ ಆದರ್ಶ. ಸಾವಿತ್ರಿಯದು ಸತ್ಯದ, ಛಲದ, ಧೃತಿಯ ನಡೆ. ತನ್ನ ಪತಿಯನ್ನು ಹಿಂತಿರುಗಿ ಪಡೆಯುವ ಗುರಿಯ ಹಿನ್ನಲೆಯಲ್ಲಿ ಯಮನಿಗೂ ಅಂಜಿದವಳಲ್ಲ ಆಕೆ. ತಾನು ಬಯಸಿದ ಫಲ ಸಿಗುವಲ್ಲಿಯವರೆಗೆ ಯಮನನ್ನು ಅನುಸರಿಸಿ ಸಾಗಿ, ತನ್ನ ಅತ್ತೆ ಮಾವಂದಿರಿಗಾಗಿ ಮತ್ತು ಸತ್ಯಕ್ಕಾಗಿ ಹೋರಾಡಿದ ವಿಷಯವೂ ಸಾವಿತ್ರಿಯ ನೆನಪಿನೊಡನೆ ನಮ್ಮ ಮನಸ್ಸಿಗೆ ಬರುತ್ತದೆ.

ದಮಯಂತಿಯದೂ ಸೀತೆಯಂತೆಯೇ ಕಾಡಿನ ಬದುಕು, ಅಪಮಾನದ ವೇದನೆ. ಇವೆಲ್ಲಾ ಇದ್ದಾಗಲೂ ತನ್ನ ಪತಿ ರೂಪಹೀನನಾಗಿದ್ದರೂ ರಾಜ್ಯಭ್ರಷ್ಟನಾಗಿದ್ದರೂ ದೀನ ದರಿದ್ರನಾಗಿದ್ದರೂ ಅವನನ್ನು ಹುಡುಕಿಸಿ ತನ್ನ ಬಳಿಗೆ ಕರೆತರಲು ಉಪಾಯದ ಯೋಜನೆ ಸಿದ್ಧಪಡಿಸಿ ಕೊನೆಗೆ ಪತಿಯೊಡನೆ ಸೇರುವಳು. ಅದಕ್ಕಾಗಿ ಅಕೆ ಅನುಭವಿಸಿದ ಕಷ್ಟಗಳು ನೂರಾರು. ಆದರೂ ಗುರಿ ಸೇರುವಲ್ಲಿದ್ದ ಆಕೆಯ ಧೃತಿ, ಛಲ ಅಲುಗಾಡಲಿಲ್ಲ. ಸಾವಿತ್ರೀ ದಮಯಂತಿಯರು ಮಾಡಿದ ತ್ಯಾಗ ಎಂತಹ ಮಹೋನ್ನತವಾದುದು!! ಈ ಅಂಶವೂ ಗಮನಾರ್ಹ.

ತನ್ನ ಮಗ ಲಕ್ಷ್ಮಣನಿಗೆ ರಾಮನು ವನವಾಸವನ್ನು ವಿಧಿಸದಿದ್ದರೂ ರಾಮಸೀತೆಯರ ರಕ್ಷಣೆಗಾಗಿ ಸ್ವ-ಇಚ್ಛೆಯಿಂದ ಕಾಡಿಗೆ ಕಳುಹಿಸಿಕೊಡುವ ದಿಟ್ಟೆ, ತ್ಯಾಗಮಯಿ ಮಾತೆ **ಸುಮಿತ್ರೆ.** 'ಅಟವೀಂ ಅಯೋಧ್ಯಾಂ ವಿದ್ಧಿ ರಾಮಂ ದಶರಥಂ ವಿದ್ಧಿ' ಎಂದು ಮಗನಿಗೆ ಬುದ್ಧಿ ಹೇಳಿ ಕಳುಹಿಸಿಕೊಟ್ಟ ವಿಶಾಲಹೃದಯಿ ಮಾತೆ ಆಕೆ.

**ಪಾತಿವ್ರತ್ಯ:** ಸ್ತ್ರೀ ಸಹಜ ಪಾತಿವ್ರತ್ಯದ ಮೊದಲ ಆದರ್ಶ **ಅನಸೂಯೆ.** ಆಕೆ ಕೇವಲ ಪತಿಯ ಪಾದೋದಕದಿಂದ ಎಂತೆಂತಹ ವಿಸ್ಮಯಗಳನ್ನು ಸಾಧಿಸಿದಳು! ಸೃಷ್ಟಿಸ್ಥಿತಿಲಯಾದಿ ಕಾರಕರಾದ ಬ್ರಹ್ಮಾವಿಷ್ಣುಮಹೇಶ್ವರರನ್ನೂ, ಅವರ ಪತ್ನಿಯರನ್ನೂ ತನ್ನ ಅಧೀನ ಮಾಡಿಕೊಂಡ ಘನ ಮಹಿಳೆ ಅವಳು. ಆಕೆಯ ತಂಗಿಯ ಗಂಡ ಋಷಿಯೊಬ್ಬನ ಶಾಪಕ್ಕೆ ಒಳಗಾಗಿ, ಸೂರ್ಯೋದಯವಾದರೆ ಮರಣ ಹೊಂದಬೇಕಾಗಿತ್ತು. ತಂಗಿ, 'ಸೂರ್ಯೋದಯವೇ ಆಗದೆ ಹೋಗಲಿ' ಎಂದು ತನ್ನ ಪಾತಿವ್ರತ್ಯದ ಬಲದಿಂದ ಸೂರ್ಯೋದಯವನ್ನೇ ತಡೆದಳು. ಆದರೆ ಒಬ್ಬಳಿಗಾಗಿ ಸೂರ್ಯನಿಲ್ಲದೆ ಸಕಲ ಲೋಕದ ವ್ಯವಹಾರ ನಿಲುಗಡೆಗೆ ಬಂದು ತಲ್ಲಣಗೊಂಡಿದ್ದುದರಿಂದ ಸಕಲದೇವತೆಗಳೂ ವಿಷ್ಣುವಿನ ಮೊರೆ ಹೊಕ್ಕರು. ಯಾರಿಂದಲೂ ಆ ತಂಗಿಯ ನಿರ್ಣಯವನ್ನು ಬದಲಾಯಿಸಲಾಗಲಿಲ್ಲ.



ಅನಸೂಯೆ

ಅಂತಹ ಧೃತಿ ಆಕೆಯದು. ಕೊನೆಗೆ ಎಲ್ಲ ದೇವತೆಗಳೂ ಅನಸೂಯೆಯ ಮೊರೆ ಹೋದರು. ಆಕೆ ತಂಗಿಯ ಮನ ಒಲಿಸಿ ಶಾಪ ಹಿಂದೆ ಗೆದುಕೊಳ್ಳುವಂತೆ ಮಾಡಿದಳು. ಸೂರ್ಯೋದಯವಾದಾಗ ಒದಗುವ ಮರಣದಿಂದ ಆಕೆಯ ಪತಿಯನ್ನು ತನ್ನ ಪಾತಿವ್ರತ್ಯದ ಬಲದಿಂದಲೇ ಪಾರುಮಾಡುವಳು ಅನಸೂಯೆ. ಎಂತೆಂತಹ ಅಸಂಭವವನ್ನೂ ಸಂಭವವಾಗಿ ಮಾಡಬಲ್ಲ ಪತಿವ್ರತಾ ಶಿರೋಮಣಿ ಅನಸೂಯೆ. ಅಗಸ್ತ್ಯರ ಪತ್ನಿ **ಲೋಪಾಮುದ್ರೆ**, ಚ್ಯವನರ ಪತ್ನಿ **ಸುಕನ್ಯೆ** ಮೊದಲಾದವರು ಈ ಸಾಲಿನಲ್ಲಿ ಬರುತ್ತಾರೆ.

**ಭಕ್ತೆ:** ಭಕ್ತೆಯರ ಪರಂಪರೆಯಲ್ಲಿ ಶಬರಿ, ಕುಂತಿ, ದ್ರೌಪದಿ, ಮೀರಾ, ಆಂಡಾಳ್, ದೇವಕಿ, ಯಶೋದೆ, ಗೋಪಿಕಾಸ್ತ್ರೀಯರು ಶ್ರೀರಾಮಕೃಷ್ಣರ ಭಕ್ತೆಯರಾದ ಗೋಲಾಪ್‌ಮಾ, ಲಕ್ಷ್ಮೀದೇವಿ, ಗೋಪಾಲೇರ್ ಮಾ, ಮೊದಲಾದ ಮಹಿಳೆಯರ ಸುದೀರ್ಘ ಪಟ್ಟಿ ಮನದಲ್ಲಿ ಸುಳಿಯುತ್ತದೆ.

**ಮಾತೃತ್ವ:** ಮಕ್ಕಳನ್ನು ಸತ್ಪ್ರಜೆಗಳಾಗಿ ರೂಪಿಸಿ ರಾಷ್ಟ್ರ ಸಂರಕ್ಷಕರನ್ನಾಗಿ ತಿದ್ದಿ ತೀಡಿ ರೂಪಿಸಿದ ತಾಯಿಯರಾಗಿ ಜೀಜಾಬಾಯಿ (ಶಿವಾಜಿಯ ತಾಯಿ), ಪುತಲೀಬಾಯಿ (ಮಹಾತ್ಮಾ ಗಾಂಧಿಯವರ ತಾಯಿ), ಭುವನೇಶ್ವರೀದೇವಿ (ಸ್ವಾಮಿ ವಿವೇಕಾನಂದರ ತಾಯಿ), ವಿದ್ಯಾವತೀ (ಭಗತ್‌ಸಿಂಗರ ತಾಯಿ), ಅಹಲ್ಯಾಬಾಯಿ ಹೋಳ್ಕರ್ ಮೊದಲಾದವರು ಅತ್ಯಂತ ಸುಪ್ರಸಿದ್ಧರಾಗಿದ್ದಾರೆ.

**ಶೌರ್ಯ:** ವೀರಮಹಿಳೆ ಎಂದ ಕ್ಷಣದಲ್ಲಿ ಕಿತ್ತೂರು **ರಾಣಿ ಚೆನ್ನಮ್ಮ**, ಝಾನ್ಸಿರಾಣಿ **ಲಕ್ಷ್ಮೀಬಾಯಿ**, ರಾಣಿ **ಅಬ್ಬಕ್ಕ** ಮೊದಲಾದವರ ಚಿತ್ರ ಕಣ್ಣು ತುಂಬುವುದು. ನರಕಾಸುರನ ವಧೆಗೆ ಶ್ರೀಕೃಷ್ಣ ಹೊರಟಾಗ ಅವನೊಡನೆ ಯುದ್ಧದಲ್ಲಿ ಸಹಾಯಕಿಯಾಗಿ **ಸತ್ಯಭಾಮೆ** ಹೋಗುವಳು, ದಶರಥ ದೇವಾಸುರರೊಡನೆ ಯುದ್ಧಕ್ಕಾಗಿ ಹೋದಾಗ **ಕೈಕೇಯಿ**ಯೂ ರಣರಂಗಕ್ಕೆ ಹೋಗುವಳು, ದಶರಥನು ಪ್ರಜ್ಞೆ ತಪ್ಪಿದಾಗ ಯುದ್ಧದಲ್ಲಿ ಹೋರಾಡಿ ಅವನ ಪ್ರಾಣಸಂರಕ್ಷಣೆ ಮಾಡುವಳು. ಇದರೊಡನೆ ವೇದಕಾಲದಲ್ಲೇ ರಣರಂಗದಲ್ಲಿ ಹೋರಾಡಿ ತಮ್ಮ ಅವಯವಗಳನ್ನು ಕಳೆದುಕೊಂಡು, ಅನಂತರ ಅಶ್ವಿನೀದೇವತೆಗಳ ಅನುಗ್ರಹದಿಂದ ಅವಯವಗಳನ್ನು ಸರಿಪಡಿಸಿಕೊಂಡ ವಿಷ್ಪಲಾ, ಮುದ್ಗಲಾನೀ, ಭಾಮಿನೀ ಮೊದಲಾದವರನ್ನು ವೇದಸೂಕ್ತಗಳು ಪರಿಚಯಿಸುತ್ತವೆ.

**ತ್ಯಾಗಮಯಿ:** ತಮ್ಮನ್ನು ತಮ್ಮ ಸರ್ವಸ್ವವನ್ನೂ ಒಂದು ಕಾರಣಕ್ಕೆ, ಒಂದು ಗುರಿ ಸಾಧನೆಗೆ ತ್ಯಾಗಮಾಡಿದ **ಯಶೋಧರಾ**, **ಆಮ್ರಪಾಲೀ** ಮೊದಲಾದ ತಾಯಂದಿರು ಅಗಣಿತ ಸಂಖ್ಯೆಯಲ್ಲಿದ್ದಾರೆ.

ಇದುವರೆಗೆ ನಾವು ತಿಳಿದ ಸ್ತ್ರೀಯರ ವಿವಿಧ ಆದರ್ಶಗಳೆಲ್ಲದರ ಸಾಕಾರ ಮೂರ್ತಿ **ಶ್ರೀಮಾತೆ ಶಾರದಾದೇವಿ.** ಆಕೆ ಸೀತೆಯಂತೆ ಎಷ್ಟು ವಿಧ ಕಷ್ಟಗಳನ್ನೂ ಅಪಮಾನಗಳನ್ನೂ ಹಿಂಸೆಗಳನ್ನೂ ಅನುಭವಿಸಿದರು! ಆದರೆ ಯಾವುದೊಂದಕ್ಕೂ ಕಿಂಚಿತ್ತೂ ಜಗ್ಗದೆ ಎಲ್ಲವನ್ನೂ ಧೃತಿಯಿಂದ ಎದುರಿಸಿದರು. ಸಂಘಜನನಿಯಾಗಿ ವಿವಿಧ ಸ್ವಭಾವದ, ಸಮಾಜದ ವಿವಿಧ ಮಜಲಿನಿಂದ ಬಂದಿದ್ದ ಹಲವಾರು ವ್ಯಕ್ತಿಗಳನ್ನು ಒಂದು ಗುರಿಯೆಡೆಗೆ ಸಾಗುವಂತೆ ಮಾಡಲು ಹಲವು ವಿಧದ ಬಾಧೆಗಳನ್ನು ತಡೆದುಕೊಳ್ಳಬೇಕಾಯಿತು. ತಾಯಿಯಾಗಿ ಆಕೆ ಅವರನ್ನು ಹಲವು ಪರಿಯಲ್ಲಿ ತಿದ್ದಿತೀಡಿ ಸುಂದರ ಮೂರ್ತಿಗಳನ್ನಾಗಿ ಮಾಡಿದರು. ನನ್ನವರು, ಪರಕೀಯರು ಎಂಬ ಭೇದಭಾವವಿಲ್ಲದೆ, ಸಜ್ಜನ-ದುರ್ಜನ ಎನ್ನದೆ ಎಲ್ಲರನ್ನೂ ತನ್ನ ಮಡಿಲಿನ ಆಸರೆಗೆ ತಂದುಕೊಂಡು ಉದ್ಧರಿಸಿದ ಮಮತಾಮಯಿ ಆಕೆ. ನರೇಂದ್ರ ವಿಶ್ವವಿಖ್ಯಾತ ಸ್ವಾಮಿ ವಿವೇಕಾನಂದನಾದುದು ಆಕೆಯ ಆಶೀರ್ವಾದ ಹರಕೆಯ ಬಲದಿಂದಲೇ. ಆಕೆಯ ಪಾತಿವ್ರತ್ಯದ ಪ್ರಬಲ ಪ್ರಭಾವ ಶಬ್ದಗಳಿಗೆ ನಿಲುಕದುದು.

ಹೀಗೆ ಹರಿದು ಬಂದ ಮಹಿಳೆಯರ ಶಕ್ತಿ ಗುಣ ಆದರ್ಶಗಳು ಇಂದಿನವರೆಗೆ ಪ್ರಭಾವ ಬೀರುತ್ತಲೇ ಬಂದಿವೆ. ಗಗನನೌಕೆಯಲ್ಲಿ ಇತರ ಗ್ರಹಗಳಿಗೆ ಸಂಚಾರ ಮಾಡುವಲ್ಲಿಯವರೆಗೆ ಆಧುನಿಕ ಮಹಿಳೆಯರು ಎಲ್ಲಾ ಕ್ಷೇತ್ರಗಳಲ್ಲಿ ತಮ್ಮ ಜಾಣ್ಮೆ, ನೈಪುಣ್ಯ, ಸಾಧನೆ, ಪ್ರತಿಭೆ, ಪಾಂಡಿತ್ಯ, ಸ್ಥೈರ್ಯ-ಧೈರ್ಯಗಳನ್ನು ಪ್ರಕಟಿಸುತ್ತಾ ವಿಜಯಶೀಲರಾಗಿ ಮುನ್ನಡೆಯುತ್ತಿರುವುದು ಸರ್ವಜನವಿದಿತ ಅಂಶ. ಈ ಎಲ್ಲದಕ್ಕೆ ಹಿಂದಿನ ಆದರ್ಶ ಮಹಿಳೆಯರೇ ಪ್ರೇರಕಶಕ್ತಿ.

### ಉಪಸಂಹಾರ

ತೇ ಧ್ಯಾನಯೋಗಾನುಗತಾ ಅಪಶ್ಯನ್
ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ ।

'ತನ್ನ ಗುಣಗಳಿಂದ ಗೂಢವಾಗಿ ಗುಪ್ತವಾಗಿದ್ದ ಆ ದೇವಾತ್ಮಶಕ್ತಿಯನ್ನು ಮುನಿಗಳು ಧ್ಯಾನಯೋಗದಲ್ಲಿ ಕಂಡುಕೊಂಡರು.' ಎಂಬುದು **ಶ್ವೇತಾಶ್ವತರ ಉಪನಿಷತ್ತಿ**ನ ಮಾತು. ಹಾಗೂ,

ಸರ್ವಭೂತೇಷು ಸರ್ವಾತ್ಮನಾ ಯಾ ಶಕ್ತಿರಪರಾ ತವ ।
ಗುಣಾಶ್ರಯಾ ನಮಸ್ತಸ್ಯೈ ಶಾಶ್ವತಾಯೈ ಪರಮೇಶ್ವರ ॥

'ಎಲ್ಲಾ ಜೀವಿಗಳಲ್ಲಿ ಎಲ್ಲಾ ರೂಪ ಭಾವ ಗುಣಗಳ ಆಶ್ರಯದಾತೆಯಾದ ಶಾಶ್ವತರೂಪಿಣಿಯಾದ ಆ ಶಕ್ತಿಗೆ ನಮನ' ಎಂಬ ಮಾತು ಮಹಿಳೆಯನ್ನು ಭಾರತೀಯರು ದೇವಿಯಾಗಿ ಶಕ್ತಿಯಾಗಿ ತಾಯಿಯಾಗಿ ಪರಮಪಾವನೆಯಾಗಿ ಆದರ್ಶಗೃಹಿಣಿಯಾಗಿ ಸರ್ವಮಂಗಳೆಯಾಗಿ ಮನ-ಮನೆಯ ಬೆಳಕಾಗಿ ಭಾವಿಸಿ ಆದರಿಸಿ ಗೌರವಿಸಿ ನಮಿಸಿದ್ದಾರೆ ಎಂಬುದನ್ನು ತಿಳಿಸುತ್ತಾ ಭಾರತೀಯ ಮಹಿಳೆಯರ ಪರಮೌನ್ನತ್ಯ ಸ್ಥಾನವನ್ನು ಸ್ಪಷ್ಟಪಡಿಸುತ್ತದೆ.

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೧೮

ಶಿಲಾನಿರ್ಮಿತವಾದ ರಾಮೇಶ್ವರ ಮಂದಿರವು ಅತ್ಯಂತ ಬೃಹದಾಕಾರವುಳ್ಳದ್ದು; ಅಲ್ಲಿನ ಶಿಲ್ಪಕಲೆಯು ಕೆತ್ತನೆ ಕೆಲಸಗಳಿಂದ ತುಂಬಿದೆ. ಅದನ್ನು ನೋಡಿದಾಗ ಅತ್ಯಂತ ಆಶ್ಚರ್ಯವಾಗುವುದು. ಅದರ ನಾಲ್ಕೂ ದಿಕ್ಕಿನ ಪ್ರಾಂಗಣದ ಉದ್ದ ೧೦೦೦ ಅಡಿ ಹಾಗೂ ಅಗಲ ೬೫೭ ಅಡಿ. ಮಂದಿರದ ಹೊರಗೆ ನಾಲ್ಕೂ ದಿಕ್ಕುಗಳಲ್ಲಿ ರಾಜಪಥವಿದೆ. ಪ್ರವೇಶದ್ವಾರ ೧೦೦ ಅಡಿ ಎತ್ತರವಿದೆ; ಮಂದಿರ ಎತ್ತರ ೧೨೦ ಅಡಿ. ಚತುಷ್ಕೋಣಾಕೃತಿಯಲ್ಲಿ ನಿರ್ಮಿಸಲಾದ ಈ ವಿಶಾಲ ಮಂದಿರದ ದ್ವಾರದ ಮೂಲಕ ಒಳಹೊಕ್ಕರೆ, ಪೂರ್ವದಿಕ್ಕಿನ ವರಾಂಡದಲ್ಲಿ ಮಂತ್ರಿಸಮೇತ ರಾಜನ ಮೂರ್ತಿಗಳಿವೆ. ಈ ರಾಜನೇ ಈ ಸ್ಥಳದಲ್ಲಿ ದಾನಶಾಲೆಯನ್ನು ಸ್ಥಾಪಿಸಿದನು.

ಮಂದಿರದ ನಡುವೆ ಒಂದು ಬದಿಯಲ್ಲಿ ನಾಲ್ಕೂ ಕಡೆ ಕಲ್ಲಿನಿಂದ ಕಟ್ಟಿರುವ ಕುಂಡವಿದೆ. ಮಂದಿರದ ನಡುವೆ ಕೆಲವು ಮಹಲುಗಳಿವೆ. ಅವುಗಳಲ್ಲಿ ಅನೇಕ ದೇವತೆಗಳ ವಿವಿಧ ಲೀಲೆಗಳನ್ನು ಚಿತ್ರಿಸಿರುವ ಕಟ್ಟಡಗಳಿವೆ; ಅಲ್ಲಿ ದೇವದೇವತೆಗಳ ಉತ್ಸವಗಳನ್ನು ನಡೆಸುವ ಸ್ಥಳಗಳು ಹಾಗೂ ಮೂರ್ತಿಗಳು ಇವೆ. ಹೀಗೆ ಎರಡು ಮೂರು ಮಹಲುಗಳನ್ನು ದಾಟಿ, ರಾಮೇಶ್ವರನ ಮಹಲನ್ನು ಪ್ರವೇಶಿಸಬೇಕು. ಈ ಮಹಲಿನ ಪ್ರಾಂಗಣದಲ್ಲಿ ಸುಮಾರು ಒಂದು ಅಂತಸ್ತಿನಷ್ಟು ಎತ್ತರವಾದ ಕಲ್ಲಿನ ಒಂದು ವೃಷಭವಿದೆ. ಅದನ್ನು 'ನಂದಿ' ಎಂಬ ಹೆಸರಿನಿಂದ ಕರೆಯುತ್ತಾರೆ. ಅದರ ಬಳಿ ಮೂರಂತಸ್ತು ಎತ್ತರದ ಒಂದು ಲೋಹನಿರ್ಮಿತವಾದ ಯೂಪಸ್ತಂಭವನ್ನು ನಿಲ್ಲಿಸಲಾಗಿದೆ. ಪ್ರತಿದಿನವೂ ಅದಕ್ಕೆ ಪೂಜೆ ಮಾಡಲಾಗುವುದು. ಈ ಮಹಲಿನ ನಾಲ್ಕೂ ಕಡೆ ವಿಶ್ವನಾಥ, ಕೇದಾರನಾಥ, ಗೋಕರ್ಣ ಮೊದಲಾದ ಲಿಂಗಮೂರ್ತಿಗಳು ಪ್ರತ್ಯೇಕ ಪ್ರತ್ಯೇಕವಾಗಿ ರಾರಾಜಿಸುತ್ತಿವೆ. ಪಕ್ಕದಲ್ಲಿರುವ ಬೃಹತ್ತಾದ ಮಹಲಿನಲ್ಲಿ ಪಾರ್ವತೀದೇವಿಯ ಮೂರ್ತಿಯಿದೆ.

ನಾವು ಅಂದು ರಾತ್ರಿ ರಾಜಪಥದಿಂದಲೇ ರಾಮೇಶ್ವರನಿಗೆ ಪ್ರಣಾಮ ಮಾಡಿ, ನಮ್ಮ ನಿವಾಸಕ್ಕೆ ಮರಳಿದೆವು. ಮರುದಿನ ಪ್ರಾತಃಕಾಲ ಸಮುದ್ರ ಸ್ನಾನ ಮಾಡಿ, ವಿಧಿಪ್ರಕಾರ ಮೇಲೆ ಹೇಳಿದ ದೇವದೇವತೆಗಳ ದರ್ಶನ ಮಾಡಿ, ಅನಂತರ ರಾಮೇಶ್ವರನ ಸ್ಥಾನಕ್ಕೆ ಹೋದೆವು. ರಾಮೇಶ್ವರನ ಮರಳುಗಲ್ಲಿನ ಲಿಂಗಮೂರ್ತಿ ಕುಂಡದ ಮೇಲಿನಿಂದ ಅರ್ಧಭಾಗ ಕಾಣಿಸುತ್ತದೆ. ಅದು ಗಟ್ಟಿಯಾದ ಮೂರ್ತಿಯಲ್ಲ. ಅದು ಮರಳುಗಲ್ಲಿನ ಮೂರ್ತಿಯಾದ್ದರಿಂದ, ಅದನ್ನು ಯಾವಾಗಲೂ ಚಿನ್ನದ ಕಿರೀಟದಿಂದ ಆವೃತವಾಗಿ ಇರಿಸಲಾಗಿದೆ. ಆ ಕಿರೀಟದ ಮೇಲೆ ನೀರನ್ನು ಎರೆಯಲಾಗುವುದು. ಆದರೂ ಬೆಳಗಿನ ಹೊತ್ತು ಗಂಗಾಜಲದಲ್ಲಿ ಮೊದಲು ಸ್ನಾನ ಮಾಡಿಸುವಾಗ ಆ ಕಿರೀಟದ ಆವರಣವನ್ನು ತೆಗೆಯಲಾಗುತ್ತದೆ. ಆಗ ಆ ಮೂರ್ತಿಯ ದರ್ಶನ ಮಾಡಬಹುದು. ಅಥವಾ ಯಾರಾದರೂ ಯಾತ್ರಿಕರು ಗಂಗೋತ್ರಿಯ ಜಲವನ್ನು ಅಭಿಷೇಕ ಮಾಡಬಯಸಿದ್ದರೆ, ಅದಕ್ಕಾಗಿ ರಾಮನಾಡಿನ ರಾಜನ ನ್ಯಾಯಾಲಯದಲ್ಲಿ ಒಂದು ರೂಪಾಯಿ ಹನ್ನೆರಡಾಣೆ ಜಮೆ ಮಾಡಿಸಿ, ಅನುಮತಿ ಪತ್ರವನ್ನು ತಂದರೆ, ಆಗ ಮಂದಿರದ ಪೂಜಾರಿಗಳು ಆ ಕವಚವನ್ನು ತೆರೆದು ಆ ಗಂಗಾಜಲವನ್ನು ಲಿಂಗದ ಮೇಲೆ ಎರೆಯುತ್ತಾರೆ. ರಾಮೇಶ್ವರದಲ್ಲಿ ಪ್ರತಿದಿನವೂ ಸ್ನಾನ ಹಾಗೂ ನೈವೇದ್ಯಕ್ಕೆ ಗಂಗಾಜಲವನ್ನೇ ಉಪಯೋಗಿಸುತ್ತಾರೆ. ಪ್ರತಿದಿನ ಆ ನೀರನ್ನು ತರಲು ಹಾಗೂ ಅದರ ಖರ್ಚುನಿರ್ವಹಣೆಗಾಗಿ ಹೋಳ್ಕರ್ ರಾಣಿ ಅಹಲ್ಯಾಬಾಯಿ ಸಾಕಷ್ಟು ಹಣ ನೀಡಿ ಸರಿಯಾದ ವ್ಯವಸ್ಥೆ ಮಾಡಿದ್ದಾಳೆ.

ದೇವರ ಅರ್ಚಕರೆಲ್ಲರೂ ದಾಕ್ಷಿಣಾತ್ಯ ಬ್ರಾಹ್ಮಣರು. ದೇವರ ಗುಡಿಯಲ್ಲಿ ಯಾವುದೇ ಯಾತ್ರಿಕರು ಪ್ರವೇಶ ಮಾಡಲಾಗದು. ಯಾರಾದರೂ ಪೂಜೆ ಮಾಡಿಸಲು ಇಚ್ಛೆಪಟ್ಟರೆ, ಈ ಪೂಜಾರಿಗಳ ಮೂಲಕವೇ ಪೂಜೆ ಮಾಡಿಸಬೇಕು. ಅಷ್ಟೇಕೆ, ದಾಕ್ಷಿಣಾತ್ಯ ಬ್ರಾಹ್ಮಣರೂ ಅಲ್ಲಿಗೆ ಪ್ರವೇಶ ಮಾಡುತ್ತಾರೆ, ಆದರೆ ಉತ್ತರ ಭಾರತದ ಬ್ರಾಹ್ಮಣರಿಗೆ ಪ್ರವೇಶದ ಅಧಿಕಾರವಿಲ್ಲ. ಶಿವಮಂದಿರದಲ್ಲಿನ ಈ ನಿಯಮ ಭಾರತದಲ್ಲಿ ಬೇರೆಲ್ಲೂ ಇಲ್ಲ. ಆದರೂ ಶ್ರೀಮಾತೆಯವರದು ಬೇರೆ ವಿಷಯ. ರಾಮನಾಡಿನ ರಾಜ ಸ್ವಾಮೀಜಿಯವರ ಶಿಷ್ಯನಾಗಿದ್ದ. ರಾಮೇಶ್ವರ ದ್ವೀಪ ಈ ರಾಜ್ಯಕ್ಕೆ ಸೇರಿದ್ದರಿಂದ ರಾಜ ಮೊದಲೇ ಹೇಳಿ ಕಳುಹಿಸಿದ್ದ: ತನ್ನ ಗುರುವಿನ ಗುರು, ಪರಮಗುರು ದೇವರ ದರ್ಶನಕ್ಕಾಗಿ ಬರುತ್ತಿದ್ದಾರೆ; ಅವರಿಗಾಗಿ ಎಲ್ಲ ವ್ಯವಸ್ಥೆಯನ್ನೂ ಮಾಡಬೇಕು ಎಂಬುದಾಗಿ. ಒಂದು ದಿನ ಶ್ರೀಮಾತೆ ಹಾಗೂ ಅವರ ಸ್ತ್ರೀ-ಪುರುಷ ಭಕ್ತರೆಲ್ಲರೂ ಒಂದು ರೂಪಾಯಿ ಹಾಗೂ ನಾಲ್ಕಾಣೆ ಇವನ್ನು ತೆಗೆದುಕೊಂಡು, ಪಂಡಾಗಳಿಗೆ ಶುಲ್ಕ ನೀಡಿ, ತಮ್ಮ ಕೈಯಿಂದಲೇ ಗಂಗೋತ್ರಿಯ ಜಲ ತೆಗೆದುಕೊಂಡು ಮಹಾದೇವನ ಬಳಿಗೆ ಹೋಗಿ, ಅವನ ಪೂಜೆ ಮಾಡಿದರು. ಶಶಿ ಮಹಾರಾಜ್ ಶ್ರೀಮಾತೆಯವರ ಪೂಜೆಗಾಗಿ ೧೦೮ ಚಿನ್ನದ ಬಿಲ್ವಪತ್ರೆಗಳನ್ನು ಮೊದಲೇ ಸಂಗ್ರಹಿಸಿ ಇಟ್ಟುಕೊಂಡಿದ್ದರು.

ನಾವು ಪದ್ಧತಿ ಪ್ರಕಾರ ಮೂರು ದಿನ ರಾಮೇಶ್ವರದಲ್ಲಿ ವಾಸ, ಸಮುದ್ರಸ್ನಾನ, ಶಿವನ ಪೂಜೆ ಹಾಗೂ ಆರಾತ್ರಿಕ ದರ್ಶನ ಮಾಡಿದೆವು. ಮಾರನೇ ದಿನ ಶ್ರೀಮಾತೆ ವಿಶೇಷರೀತಿಯಲ್ಲಿ ಶಿವನ ಪೂಜೆ ಮಾಡಿದರು. ಪಂಡಾಗಳ ಗ್ರಂಥಗಳಲ್ಲಿ ವಿವರಿಸಲಾಗಿದ್ದ ರಾಮೇಶ್ವರದ ಕಥೆಯನ್ನು ಅವರು ಹರಿದಾಸರ ಮೂಲಕ ಕೇಳಿದರು. ಅನಂತರ ಪಂಡಾಗಳಿಗೆ ಭೋಜನ ಮಾಡಿಸಿದರು. ಪ್ರತಿಯೊಬ್ಬ ಪಂಡಾನಿಗೂ ಒಂದೊಂದು ನೀರಿನ ಕೊಡವನ್ನು ದಾನ ಕೊಡಿಸಿದರು. ಶ್ರೀಮಾತೆ ಕೈಯಲ್ಲಿ ಅಡಿಕೆ, ನಾಣ್ಯ ಇವನ್ನು ಹಿಡಿದುಕೊಂಡು ಕಥೆ ಕೇಳಿದರು ಹಾಗೂ ಕಥಾಶ್ರವಣದ ನಂತರ ಪ್ರಣಾಮ ಮಾಡಿದರು. ಪ್ರತಿದಿನ ಸಾಯಂಕಾಲ ಸಾಮಾನ್ಯವಾಗಿ ತುಂಬ ವಿಜೃಂಭಣೆಯಿಂದ ಬೆಳಕು, ವಾದ್ಯ, ಆನೆ, ಕುದುರೆ ಇತ್ಯಾದಿಗಳೊಂದಿಗೆ ರಾಮೇಶ್ವರನ ಸವಾರಿ ರಾಜಪಥದಲ್ಲಿ ಹೊರಗೆ ಬರುತ್ತಿತ್ತು. ಪ್ರತಿದಿನವೂ ರಾಮೇಶ್ವರನ ಒಂದೊಂದು ಲೀಲೆ ಅಥವಾ ಉತ್ಸವದ ಅನುಕರಣೆಯನ್ನು ಸವಾರಿಯಲ್ಲಿ ನೋಡಬಹುದಾಗಿತ್ತು. ಸವಾರಿಯಲ್ಲಿದ್ದ ಮೂರ್ತಿಗಳೆಲ್ಲವೂ ಚಿನ್ನ ಅಥವಾ ಬೆಳ್ಳಿಯ ಶಿವನ ಉತ್ಸವ ಮೂರ್ತಿಗಳು. ಸವಾರಿಯೊಂದಿಗೆ ನರ್ತಕಿಯರು – ಅವರನ್ನು 'ದೇವನರ್ತಕಿಯರು' ಎನ್ನುತ್ತಿದ್ದರು; ಅವರು ಎಲ್ಲರಿಗಿಂತ ಮುಂದೆ ನೃತ್ಯ, ಗೀತೆ ಮಾಡುತ್ತಿದ್ದರು. ಹೀಗೆ ಇಡೀ ದೇವಾಲಯವನ್ನು ಪ್ರದಕ್ಷಿಣೆ ಮಾಡುತ್ತ ಸವಾರಿ ಮತ್ತೆ ಮಂದಿರವನ್ನು ಪ್ರವೇಶ ಮಾಡುತ್ತಿತ್ತು. ಒಳಗೆ ಕೂಡ ಸ್ವಲ್ಪ ಹೊತ್ತು ಮತ್ತೆ ದೇವನರ್ತಕಿಯರು ನೃತ್ಯ, ಗೀತೆ ಮಾಡುತ್ತಿದ್ದರು.

ಈ ದೇವನರ್ತಕಿಯರ ಅಲಂಕಾರ, ಒಟ್ಟು ವೇಷಭೂಷಣಗಳು, ಆಹಾರ ಇತ್ಯಾದಿ ಎಲ್ಲದರ ಖರ್ಚುವೆಚ್ಚಗಳನ್ನು ದೇವಾಲಯವೇ ನೋಡಿಕೊಳ್ಳಬೇಕಿತ್ತು: ಆದರೆ ಯಾರಲ್ಲಾದರೂ ಯಾವುದೇ ಬಗೆಯ ಚಾರಿತ್ರ್ಯದೋಷ ಉಂಟಾದರೆ, ಅವರಿಂದ ಅಲಂಕಾರಾದಿಗಳನ್ನು ಮರಳಿ ವಸೂಲಿ ಮಾಡಲಾಗುತ್ತಿತ್ತು, ದೇವಾಲಯದ ಕೆಲಸದಿಂದ ಅವರು ಬಿಟ್ಟು ಹೋಗಬೇಕಾಗಿತ್ತು.

ಶಿವನ ತಲೆಯ ಮೇಲೆ ಗಂಗೋತ್ರಿಜಲವನ್ನು ಎರೆಯುವ ಸಮಯದಲ್ಲಿ ಶಿವಲಿಂಗವು ತುಸು ದೊಡ್ಡದಾಗುವುದು ಎಂದು ಹೇಳುತ್ತಾರೆ. ಕಾರ್ತಿಕ ಮಾಸದಲ್ಲಿ ರಾಮೇಶ್ವರದಲ್ಲಿ ಒಂದು ಉತ್ಸವ ನಡೆಯುವುದು. ಆಗ ಅಲ್ಲಿ ಸುಮಾರು ಎಂಟು ಲಕ್ಷ ಜನ ಸೇರುತ್ತಾರೆ. ಅಲ್ಲಿಗೆ ಸಮೀಪದಲ್ಲೇ ಶ್ರೀಶಂಕರಾಚಾರ್ಯರು ಪ್ರತಿಷ್ಠಾಪಿಸಿದ 'ಶೃಂಗೇರಿ' ಅಥವಾ ಶೃಂಗಗಿರಿ ಮಠವಿದೆ. ಪಟ್ಟಣದಲ್ಲೇ ಒಂದು ಹಳೆಯ ಮಹಲು ಹಾಗೂ ಅದರ ಪಕ್ಕದಲ್ಲಿ ಒಂದು ನಳಮಂದಿರ ಅಥವಾ 'ಟೋನಾಗುಡಿ'ಯಿದೆ – ಈ ಮಹಲು ಹಾಗೂ ಸೇತು ನಿರ್ಮಾಣ ಮಾಡಿದ ನಳನ ಮಂದಿರದಲ್ಲಿ ವಿಶೇಷವೇನೂ ಇಲ್ಲ ; ಪ್ರಾಚೀನ ಭಗ್ನಾವಶೇಷ ಮಾತ್ರ. ಅದರ ಪಕ್ಕದಲ್ಲಿ ಲಕ್ಷ್ಮಣಕುಂಡವೆಂಬ ನಾಲ್ಕೂಕಡೆ ಕಲ್ಲಿನಿಂದ ಕಟ್ಟಿದ ಒಂದು ಕೆರೆಯಿದೆ. ಅದರಲ್ಲಿ ಸ್ನಾನ, ಪೂಜೆ, ಹಾಗೂ ಶ್ರಾದ್ಧಾದಿಗಳನ್ನು ಮಾಡುತ್ತಾರೆ. ಆ ಕೆರೆಯ ನೀರು ಸ್ವಚ್ಛವಾಗಿದೆ ಹಾಗೂ ಸಿಹಿಯಾಗಿದೆ. ಪಟ್ಟಣದ ತುದಿಯಲ್ಲಿ ಸಮುದ್ರದ ಖಾರಿಯಲ್ಲಿದೆ ರಾಮಝುರ್ಕಾ. ಅಲ್ಲಿ ವಾಲಿಯ ಪರ್ವತ ಅಥವಾ ವಾಲಿಯಾಡಿ ಸ್ತೂಪವಿದೆ. ಈ ಸ್ತೂಪದ ಕೆಳಗೆ ಭಗ್ನಗೊಂಡ ಮಹಾದ್ವಾರ ಹಾಗೂ ಮಂದಿರವಿದೆ. ಮೆಟ್ಟಿಲ ಮೂಲಕ ಮೇಲಕ್ಕೆ ಹೋದರೆ ಅಲ್ಲೊಂದು ದೊಡ್ಡಮಂದಿರವಿದೆ; ಅಲ್ಲಿ ರಾಮ, ಸೀತೆ, ಹಾಗೂ ಹನುಮಾನ್ ಇವರ ಮೂರ್ತಿಗಳಿವೆ. ರಾಮಝುರ್ಕಾದ ಮೇಲೆ ನಿಂತಾಗ ಇಡೀ ರಾಮೇಶ್ವರ ದ್ವೀಪ ಹಾಗೂ ನಾಲ್ಕೂ ದಿಕ್ಕುಗಳಿಂದ ಸಮುದ್ರದ ಸುಂದರ ದೃಶ್ಯ ಕಾಣುವುದು. ಶ್ರೀರಾಮಚಂದ್ರ ಅಲ್ಲಿ ನಿಂತುಕೊಂಡೇ ಹನುಮಂತನಿಗೆ ಲಂಕೆಗೆ ಸೇತುವೆ ನಿರ್ಮಿಸಲು ನಿರ್ದೇಶನವಿತ್ತ ಎಂಬುದಾಗಿ ಪಂಡಾ ಹೇಳಿದ. ಗಂಧಮಾದನ ಪರ್ವತವೂ ಅಲ್ಲೇ ಇದೆ.

ರಾಮೇಶ್ವರದಿಂದ ಹದಿನಾಲ್ಕು-ಹದಿನೈದು ಮೈಲಿ ದೂರದಲ್ಲಿ ದ್ವೀಪದ ಕೊನೆಯ ಸೀಮೆಯಾದ ಪ್ರಸಿದ್ಧ 'ಧನು ತೀರ್ಥ' ಅಥವಾ 'ಧನುಷ್ಕೋಟಿ'ಯಿದೆ. ಅಲ್ಲಿಯವರೆಗೂ ರೈಲುಗಾಡಿ ಹೋಗುತ್ತದೆ. ಕಾಲುನಡಿಗೆಯಲ್ಲಿ ಹೋದರೆ ಎರಡು ದಿನ, ದೋಣಿ ಅಥವಾ ಮೀನಿನ ದೋಣಿಯಲ್ಲಿ ಹೋದರೆ ಮೂರು ಗಂಟೆ ಬೇಕಾಗುವುದು. ಈ ಸ್ಥಳದಲ್ಲಿ ನಾಲ್ಕೈದು ಮಂದಿ ಪಂಡಾಗಳು ಮಾತ್ರ ವಾಸವಾಗಿದ್ದಾರೆ. ಇಲ್ಲಿ ಸ್ನಾನ, ದಾನ ಹಾಗೂ ಶ್ರಾದ್ಧವೇ ಮೊದಲಾದವನ್ನು ಹಾಗೂ ಚಿನ್ನ, ಬೆಳ್ಳಿಗಳಿಂದ ಮಾಡಿದ ಬಿಲ್ಲು-ಬಾಣಗಳ ಮೂಲಕ ಸಮುದ್ರ ಪೂಜೆಯನ್ನು ಮಾಡಿಸುತ್ತಾರೆ. ಶ್ರೀಮಾತೆ ತಮ್ಮ ಕಡೆಯಿಂದ ಕೃಷ್ಣಲಾಲ್ ಹಾಗೂ ನನಗೆ ಚಿನ್ನ, ಬೆಳ್ಳಿಯ ಬಿಲ್ಲು-ಬಾಣಗಳನ್ನು ಕಳುಹಿಸಿಕೊಟ್ಟರು. ನಾವು ಅಲ್ಲಿಗೆ ರೈಲುಗಾಡಿಯಲ್ಲಿ ಹೋಗಿ, ಯಥಾವಿಧಿ ಸಮುದ್ರಪೂಜೆ ಮಾಡಿಬಂದೆವು.



ಧನುಸ್ತೀರ್ಥದ ವಿಷಯವಾಗಿ ಪಂಡಾಗಳಿಂದ ತಿಳಿದ ಎರಡು ಸಂಗತಿಗಳನ್ನು ಇಲ್ಲಿ ನೀಡುತ್ತಿದ್ದೇವೆ.

೧) ನಳನು ಶ್ರೀರಾಮಚಂದ್ರನ ಸೇತುವೆಯನ್ನು ನಿರ್ಮಾಣ ಮಾಡುತ್ತ ಇಲ್ಲಿಯ ತನಕ ಬಂದ. ಇಲ್ಲಿ ಸಮುದ್ರ ಅವನನ್ನು ಮುಂದೆ ಹೋಗಲು ಬಿಡಲಿಲ್ಲ. ವಾನರರು ಕಲ್ಲಿನ ಮೂಲಕ

ಸೇತುವೆ ನಿರ್ಮಿಸಲು ಎಷ್ಟೇ ಯತ್ನಿಸಿದರೂ, ಸಮುದ್ರ ಅದನ್ನು ಮುರಿದುಹಾಕುತ್ತಿತ್ತು. ಸಮುದ್ರದ ಈ ಬಗೆಯ ಬಾಧೆಯಿಂದ, ಶ್ರೀರಾಮಚಂದ್ರನು ತನ್ನ ಬಿಲ್ಲುಬಾಣಗಳಿಂದ ಅವನನ್ನು ಬಂಧಿಸಲು ಮುಂದಾದ. ಆಗ ಸಮುದ್ರನು ಭೀತನಾಗಿ ಶ್ರೀರಾಮನ ಬಳಿಗೆ ಬಂದು, ಅರ್ಘ್ಯಾದಿಗಳಿಂದ ಅವನನ್ನು ಪ್ರಸನ್ನಗೊಳಿಸಿ ''ಇನ್ನು ಮುಂದೆ ನಾನು ತಮ್ಮ ಕಾರ್ಯಕ್ಕೆ ವಿಘ್ನ ತರಲಾರೆ'' ಎಂದನು. ಆದ್ದರಿಂದಲೇ ಈ ಸ್ಥಳದ ಹೆಸರು 'ಧನುಸ್ತೀರ್ಥ' ಎಂದಾಯಿತು.

೨) ಲಂಕೆಯಿಂದ ಶ್ರೀರಾಮನು ಮರಳಿ ಬರುವಾಗ ಸಮುದ್ರ ರಾಜನು ಸಂದೇಹಪಟ್ಟ, ಸೇತುವೆಯ ಕಾರಣದಿಂದ ಜನ ಸಾಮಾನ್ಯರೆಲ್ಲರೂ ಲಂಕೆಯಲ್ಲೇ ಉಳಿದುಬಿಟ್ಟರೆ — ಎಂದು. ಅಷ್ಟೇ ಅಲ್ಲದೆ, ಅವನು ತನ್ನ ಮರ್ಯಾದೆಯನ್ನು ಉಳಿಸುವುದಕ್ಕಾಗಿ ಶ್ರೀರಾಮನ ಸನ್ನಿಧಿಗೆ ಬಂದು, ಆ ಸೇತುವೆಯನ್ನು ಭಗ್ನಗೊಳಿಸಲು ಕೈಜೋಡಿಸಿ ಪ್ರಾರ್ಥಿಸಿಕೊಂಡ. ಅವನು ದುಃಖಿತನಾದುದನ್ನು ಕಂಡ ಶ್ರೀ ರಾಮನು ತನ್ನ ಬಿಲ್ಲು-ಬಾಣಗಳಿಂದ ಆ ಸೇತುವೆಯನ್ನು ಮುರಿದು ಹಾಕಿ, ಸಮುದ್ರನ ಮರ್ಯಾದೆಯನ್ನು ಉಳಿಸಿದ. ಈ ಕಾರಣ ದಿಂದ ಆ ಪ್ರದೇಶದ ಹೆಸರು ಹೀಗಾಯಿತು. ('ಧನುಷೇಕೋಟಿ' ಅಥವಾ 'ಧನುಷ್ಕೋಟಿ'.)

ಧನುತೀರ್ಥದಿಂದ ಎರಡು ಮೂರು ಮೈಲಿ ದೂರದಲ್ಲಿ 'ಮನ್ನಾರ್ ದ್ವೀಪ' ಅಥವಾ ಸೇತುವೆಯ ಇನ್ನೊಂದು ಭಾಗ ಕಾಣಿಸುವುದು. ಸೇತುವೆಯ ಈ ಭಾಗ ನೀರಿನಲ್ಲಿ ಮುಳುಗಿದೆ ನಿಜ; ಆದರೆ ಹೆಚ್ಚು ನೀರಿಲ್ಲದ್ದರಿಂದ ಅದರ ಮಧ್ಯದಲ್ಲಾಗಿ ದೋಣಿಯ ಹೊರತಾಗಿ ಹಡಗು ಮುಂತಾದವು ಹೋಗಲಾರವು. ಈ ಪ್ರದೇಶದಿಂದ ಕಾಣುವ ದೃಶ್ಯ ಅತ್ಯಂತ ರಮಣೀಯವಾಗಿದೆ. ಎಡಭಾಗದಲ್ಲಿ ಶಾಂತಮೂರ್ತಿಯಾದ ಬಂಗಾಳಕೊಲ್ಲಿ ಹಾಗೂ ಬಲಭಾಗದಲ್ಲಿ ರಭಸವಾದ ಅಲೆಗಳಿಂದ ಕೂಡಿದ ಹಿಂದೂ ಮಹಾಸಾಗರವಿದೆ. ಪರಸ್ಪರ ವಿರೋಧಿಯಾದ ಈ ಎರಡು ಸಾಗರಗಳು ಧನುತೀರ್ಥದಲ್ಲಿ ಮಿಲನಗೊಳ್ಳುವುದರಿಂದ, ಇಲ್ಲಿ ಉಗ್ರ ಹಾಗೂ ಶಾಂತ ಭಾವಗಳ ಸಮಾಗಮವನ್ನು ಕಾಣಬಹುದಾಗಿದೆ. ಒಂದು ದಿನ ಶ್ರೀಮಾತೆಯವರಿಗೆ ಮಂದಿರದ ಮಣಿ ಕೋಠಾ(ರತ್ನಾಗಾರ)ವನ್ನು ತೆರೆದು ತೋರಿಸಲಾಯಿತು. ಆ ಕೋಣೆಯಲ್ಲಿ ಸಾಮಾನ್ಯವಾಗಿ ಒಂದು ದೀಪ ಉರಿಯುತ್ತಿತ್ತು. ಇಡೀ ಕೋಣೆ ಹಾಗೂ ಆಭರಣಗಳೆಲ್ಲಾ ಆ ದೀಪದಿಂದ ಝುಗಝುಗಿಸುತ್ತಿದ್ದವು. ಶ್ರೀಮಾತೆ ಅದನ್ನು ನೋಡಿ ವಿಶೇಷವಾಗಿ ಆನಂದಿಸಿದರು.

ರಾಮೇಶ್ವರದಲ್ಲಿ ನಾವು ಮೂರು ದಿನ ವಾಸ ಮಾಡಿದ ನಂತರ ಮದುರೆಗೆ ಹಿಂದಿರುಗಿದೆವು. ಅಲ್ಲಿ ಒಂದು ದಿನ ತಂಗಿದೆವು. ಅಲ್ಲಿ ಶಶಿ ಮಹಾರಾಜರ ಒಂದು ಭಾಷಣವೂ ನಡೆಯಿತು. ಮರುದಿನ ಅಲ್ಲಿಂದ ಹೊರಟು ಮತ್ತೆ ಮದ್ರಾಸಿಗೆ ಹಿಂದಿರುಗಿ ಬಂದೆವು.

ಮದ್ರಾಸಿನಲ್ಲಿ ಕೆಲವು ದಿನ ತಂಗಿದ ಬಳಿಕ ಠಾಕೂರರ ಜನ್ಮ ಮಹೋತ್ಸವ ಬಂತು. ಬಂಗಾಳದಂತೆ ಇಲ್ಲೂ ಮದ್ರಾಸೀ ಕೀರ್ತನೆಯ ತಂಡಗಳು ಮಠಕ್ಕೆ ಒಂದಾದ ನಂತರ ಒಂದರಂತೆ ಬಂದು, ಕೀರ್ತನೆಗಳನ್ನು ಹಾಡುತ್ತಲೇ ಇದ್ದವು. ಠಾಕೂರರ ಜನ್ಮತಿಥಿಯ ಪೂಜೆಯಂದು ಇಬ್ಬರು ಭಕ್ತರು ಶಶಿಮಹಾರಾಜರಿಂದ ಪ್ರೇರಿತರಾಗಿ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದರು. ಮದ್ರಾಸಿನಲ್ಲಿ ಇಲ್ಲಿಯತನಕ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದ ಸ್ತ್ರೀ ಹಾಗೂ ಪುರುಷ ಭಕ್ತರಲ್ಲಿ ಒಬ್ಬಾಕೆ ಪ್ರಮುಖಳಾಗಿದ್ದಳು. ಆಕೆ ದೀಕ್ಷೆಯ ನಂತರ ಶ್ರೀಮಾತೆಯವರ ಬಳಿ ಮೂರು ದಿನ ವಾಸವಾಗಿದ್ದಳು. ಅವಳು ನಮ್ಮ ಬಂಗಾಳೀ ಅಡುಗೆಯನ್ನು ಆನಂದದಿಂದ ಊಟ ಮಾಡಿದಳು. ಶ್ರೀಮಾತೆ ಅವಳನ್ನು ವಿಶೇಷವಾಗಿ ಪ್ರೀತಿಸುತ್ತಿದ್ದರು. ನಾನು ಮದ್ರಾಸಿನಲ್ಲಿ ಮೊದಲ ಬಾರಿಗೆ ಇಲೆಕ್ಟ್ರಿಕ್ ಟ್ರಾಮ್ ನೋಡಿದೆ.

ಠಾಕೂರರ ಜನ್ಮ ಮಹೋತ್ಸವದ ನಂತರ ಬೆಂಗಳೂರು ಮಠದ ಆಗಿನ ಅಧ್ಯಕ್ಷರಾಗಿದ್ದ ಸ್ವಾಮಿ ನಿರ್ಮಲಾನಂದರು (ತುಳಸೀ ಮಹಾರಾಜ್) ಬಂದು, ಶ್ರೀಮಾತೆಯವರನ್ನು ಅಲ್ಲಿಗೆ ಕರೆದುಕೊಂಡು ಹೋಗಲು ವಿಶೇಷವಾಗಿ ಪ್ರಾರ್ಥಿಸಿಕೊಂಡರು. ಆ ಪ್ರಕಾರ ಶ್ರೀಮಾತೆ ಬೆಂಗಳೂರಿಗೆ ಹೊರಟರು. ಬೆಂಗಳೂರಿನಲ್ಲಿ ಶ್ರೀಮಾತೆ ಮಠದ ಒಳಗೆ, ಠಾಕೂರರ ಈಗಿನ ಶಯನದ ಕೋಣೆಯಲ್ಲಿ ಮೂರು ದಿನ ವಾಸ ಮಾಡಿದರು. ಇತರ ಸ್ತ್ರೀಭಕ್ತರು ಮಠದ ವಿವಿಧ ಕೋಣೆಗಳಲ್ಲಿ ವಾಸ ಮಾಡಿದರು. ಈ ಮೂರು ದಿನ ಪುರುಷ ಭಕ್ತರ ವಾಸಕ್ಕಾಗಿ ಮಠದ ಜಮೀನಿನಲ್ಲಿ ಡೇರೆ ಹಾಕಲಾಯಿತು. ಬೆಂಗಳೂರಿನಲ್ಲಿ ಪ್ರತಿದಿನವೂ ಬಹಳ ಮಂದಿ ಭಕ್ತರು ಗುಂಪುಗುಂಪಾಗಿ ಬಂದು ಶ್ರೀಮಾತೆಯವರಿಗೆ ಪ್ರಣಾಮ ಸಲ್ಲಿಸಿದರು. ಅವರು ತಂದ ಹೂಗಳು ಒಂದೊಂದು ಬಾರಿ ಗೋಪುರಾಕೃತಿಯಲ್ಲಿ ತುಂಬಿಬಿಡುತ್ತಿತ್ತು. ಮಠದ ಜಮೀನಿನಲ್ಲಿ ಶ್ರೀಗಂಧದ ಮರಗಳನ್ನು ಹಾಗೂ ಒಂದು ಚಿಕ್ಕ ಬೆಟ್ಟವನ್ನು ನೋಡಿ ಶ್ರೀಮಾತೆ ಆನಂದಗೊಂಡರು. ಆ ಬೆಟ್ಟದ ಮೇಲೆ ಕಲ್ಲಿನ ಆಸನದಲ್ಲಿ ಪಶ್ಚಿಮ ಮುಖಿಯಾಗಿ ಕುಳಿತು, ತುಳಸೀ ಮಹಾರಾಜರ ಪ್ರಾರ್ಥನೆಯಂತೆ ಜಪ ಮಾಡಿದರು.

ಬೆಂಗಳೂರು ಅತ್ಯಂತ ಸುಂದರವಾದ ನಗರ. ರಸ್ತೆಗಳೆಲ್ಲ ಬಹಳ ಸ್ವಚ್ಛವಾಗಿವೆ. ಏರು-ತಗ್ಗುಗಳಿರುವ ರಸ್ತೆಗಳು, ಕಟ್ಟಡಗಳು ರಾತ್ರಿಹೊತ್ತಿನಲ್ಲಿ ವಿದ್ಯುದ್ದೀಪಗಳ ಬೆಳಕಿನಲ್ಲಿ ನೋಡುವುದಕ್ಕೆ ತುಂಬ ಮನೋಹರವಾಗಿವೆ. ಭಾರತದಲ್ಲಿ ಈ ನಗರವೇ ಮೊತ್ತ ಮೊದಲಬಾರಿಗೆ ವಿದ್ಯುಚ್ಛಕ್ತಿಯಿಂದ ಬೆಳಗಿತು. ನಾನು ವಿದ್ಯುಚ್ಛಕ್ತಿಯ ಬೆಳಕನ್ನು ಮೊತ್ತ ಮೊದಲ ಬಾರಿ ಇಲ್ಲೇ ನೋಡಿದೆ. ಮೈಸೂರು ರಾಜ್ಯದ ರೆಸಿಡೆಂಟ್ ಇಲ್ಲೇ ವಾಸಮಾಡುತ್ತಾರೆ. ಇಲ್ಲಿ ಒಂದು ಸೈನ್ಯದ ಕ್ಯಾಂಪ್ ಕೂಡ ಇದೆ. ಈ ಪ್ರದೇಶದಿಂದಲೇ ಶ್ರೀಗಂಧ ಎಲ್ಲ ಕಡೆಗೂ ಮಾರಾಟಕ್ಕೆ ಹೋಗುತ್ತದೆ. ಇಲ್ಲಿಂದ ತುಸು ದೂರದಲ್ಲಿ ಒಂದು ಪ್ರಸಿದ್ಧವಾದ ಜಲಪಾತವೂ ಇದೆ.



ಶ್ರೀಮಾತೆಯವರು ಕುಳಿತ ಶಿಲೆ, ಬೆಂಗಳೂರು

ಮದ್ರಾಸಿನಿಂದ ಬೆಂಗಳೂರಿಗೆ ಹಾಗೂ ಬೆಂಗಳೂರಿನಿಂದ ಮದ್ರಾಸಿಗೆ ಶ್ರೀಮಾತೆ ಹಾಗೂ ಇತರರು ಪ್ರಥಮ ದರ್ಜೆಯಲ್ಲಿ ಪ್ರಯಾಣ ಮಾಡಿದರು. ಬೆಂಗಳೂರಿನಿಂದ ಶ್ರೀಮಾತೆ ಮದ್ರಾಸಿಗೆ ಬಂದ ಮೇಲೆ ಅಲ್ಲೇ ಒಂದೆರಡು ದಿನ ಇದ್ದು, ಅನಂತರ ಕಲ್ಕತ್ತೆಯ ಕಡೆಗೆ ಹೊರಟರು. ದಾರಿಯ ನಡುವೆ ರಾಜಮಹೇಂದ್ರ ದಲ್ಲಿ ಅಲ್ಲಿನ ಜಡ್ಜ್ ಆಗಿದ್ದ ಒಬ್ಬ ಭಕ್ತನ ಅತಿಥಿಯಾಗಿದ್ದು, ಒಂದು ದಿನ ವಿಶ್ರಾಂತಿ ಪಡೆದರು; ಹಾಗೂ ಗೋದಾವರೀ ತೀರದಲ್ಲಿ ಸ್ನಾನ ಮಾಡಿದರು. ಜಡ್ಜ್ ಒಬ್ಬ ವೃದ್ಧ ಹಾಗೂ ಪಂಡಿತನಾಗಿದ್ದ. ಅವನು ಸ್ವಾಮಿ ನಿರ್ಮಲಾನಂದರೊಡನೆ ಸಂಸ್ಕೃತದಲ್ಲಿ ಬಹಳ ಚೆನ್ನಾಗಿ ಮಾತನಾಡಿದ. ರಾಜಮಹೇಂದ್ರವನ್ನು ಬಿಟ್ಟು, ಶ್ರೀಮಾತೆ ಪುರಿಗೆ ಬಂದರು. ಅಲ್ಲಿ ಮೂರುನಾಲ್ಕು ದಿನ ತಂಗಿದ್ದು, ಚೈತ್ರ ಮಾಸದ ೨೮ರಂದು ಮಂಗಳವಾರ ಕಲ್ಕತ್ತೆಗೆ ಹೊರಟರು. ತುಳಸೀ ಮಹಾರಾಜರು ಬೆಂಗಳೂರಿನಿಂದ ಹೆಚ್ಚುಕಡಿಮೆ ಕಲ್ಕತ್ತೆಯ ವರೆಗೂ ಜೊತೆಗೇ ಬಂದಿದ್ದರು. ರಾಮಲಾಲ್ ದಾದಾ ಠಾಕೂರರ ಜನ್ಮಮಹೋತ್ಸವ ನಡೆದ ನಂತರ ಮದ್ರಾಸಿನಿಂದ ಕಲ್ಕತ್ತೆಗೆ ಹೋಗಿದ್ದರು. ನಿತಾಯಿಯು ತಾಯಿಯವರ ಆರೋಗ್ಯ ಸುಧಾ ರಿಸಿದ್ದರಿಂದ, ಅವರು ಶ್ರೀಮಾತೆಯವರೊಂದಿಗೆ ಪುರಿಗೆ ಬಂದಿ ದ್ದರು. ಈ ಬಾರಿ ಶ್ರೀಮಾತೆ ಹಿಂದಿನಂತೆ 'ಕ್ಷೇತ್ರವಾಸಿಗಳ ಮಠ' ದಲ್ಲಿ ತಂಗದೆ, ಸಮುದ್ರಕ್ಕೆ ಸಮೀಪವಿದ್ದ ರಾಮನ ದೊಡ್ಡ ನಿವಾಸ 'ಶಶಿನಿಕೇತನ'ದಲ್ಲಿ ತಂಗಿದ್ದರು. ಪ್ರಸಿದ್ಧ ಡಾಕ್ಟರ್ ವಿಪಿನ ವಿಹಾರೀ ಘೋಷ್ ಆಗ ಪುರಿಯಲ್ಲಿ 'ಶಶಿನಿಕೇತನ' ದಲ್ಲಿದ್ದ.

ಶ್ರೀಮಾತೆ ಕಲ್ಕತ್ತೆಗೆ ಮರಳಿ ಬಂದಾಗ, ಕಲ್ಕತ್ತಾ ಹಾಗೂ ಇತರ ಪ್ರದೇಶಗಳ ಭಕ್ತರಲ್ಲಿ ಕೆಲವರು ಇಷ್ಟು ದಿನಗಳ ನಂತರ ಅವರನ್ನು ಕಂಡು, ಅವರ ಬಳಿಗೆ ಪ್ರಣಾಮ ಮಾಡಲು ಬಂದರು. ಕೆಲವರು ದೀಕ್ಷೆ ಪಡೆಯುವ ಬಯಕೆಯಿಂದ ಬರತೊಡಗಿದರು. ಬಾಗ್ ಬಜಾರಿನ 'ಉದ್ಬೋಧನ'ದ ಮನೆ ಯಾವಾಗಲೂ ಭಕ್ತವೃಂದದ ಗದ್ದಲದಿಂದ ಕೂಡಿರುತ್ತಿತ್ತು. ಹವಾಮಾನದ ಬದಲಾವಣೆ ಯಿಂದಾಗಿ ಶ್ರೀಮಾತೆಯವರ ಆರೋಗ್ಯದಲ್ಲಿ ತುಸು ಚೇತರಿಕೆ ಯುಂಟಾದ್ದರಿಂದ, ಅವರು ಕೂಡ ಎಲ್ಲರ ಮನದ ಬಯಕೆ ಯನ್ನು ಈಡೇರಿಸುವಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ಒಂದು ವಿಷಯವನ್ನಿಲ್ಲಿ ಗಮನಿಸಿದೆ — ಯಾರು ಶ್ರೀಮಾತೆ ಯವರ ಸನ್ನಿಧಾನಕ್ಕೆ ಬಂದರೋ, ಅಷ್ಟೇಕೆ, ಅವರಿಗೆ ಶ್ರೀಮಾತೆ ಯವರ ಅಮೃತೋಪಮ ವಾಣಿಯನ್ನು ಕೇಳುವ ಸೌಭಾಗ್ಯ ವೊದಗದೆ ಒಂದು ಸಲವಾದರೂ ಶ್ರೀಮಾತೆಯ ಸ್ಪರ್ಶದ ಅವ ಕಾಶ ಲಭಿಸಿತೋ ಅವರೂ ಕೂಡ ದೇವದುರ್ಲಭವಾದ ಶ್ರೀಮಾ ತೆಯ ಚರಣಕಮಲದಲ್ಲಿ ಬೀಳುವ ಬಯಕೆ, ಜನ್ಮಜನ್ಮಾಂತರದ ಭಾಗ್ಯದಿಂದ ಪೂರೈಸಿದಂತಾಯಿತು. ಜೀವನವಿಡೀ ಅವರ ದಾಸ ರಾಗುವ, ಹಗಲು ರಾತ್ರಿ ಅವರ ಸನ್ನಿಧಾನದಲ್ಲೇ ಇರುವ ಅವರ ಬಯಕೆ ಪೂರೈಸಿತು.

೧೩೧೮ರ (ಅಂದರೆ ೧೯೧೧ನೇ ಇಸವಿಯ) ವೈಶಾಖೀ ಪೌರ್ಣಮಿಯಂದು ನನ್ನ ಟಿಪ್ಪಣಿಗಳು ಕೊನೆಗೊಳ್ಳುತ್ತವೆ. ಆದ್ದ ರಿಂದ ಇಲ್ಲಿ ಕೆಲವು ಮಾತಿಗೆ ತುಸು ಅವಕಾಶ ಪಡೆಯುತ್ತಿದ್ದೇನೆ. ಮುನ್ನುಡಿಯಲ್ಲೇ ವಿಸ್ತೃತವಾಗಿ ಹೇಳಲಾಗಿದೆ, ಶ್ರೀಮಾತೆಯವರ ಜೀವನ ಕಥೆಯನ್ನು ಬರೆಯಲು ಬೇಕಾದ ಅಸಾಧಾರಣ ಧೈರ್ಯ ನನಗಿಲ್ಲ ಎಂದು; ಆದರೂ ನನಗೆ ಒಂದೇ ಸಂತೋಷ ವೇನೆಂದರೆ, ಅವರ ಪವಿತ್ರ ಚರಿತೆಯ ಸೇತುವೆಯ ನಿರ್ಮಾಣ ಕಾರ್ಯದಲ್ಲಿ ಅಳಿಲು ಸೇವೆ ಮಾಡಿದಂತಾಗಿ, ಅದು ನನ್ನ ಭಾಗ್ಯವಾಗಿಬಿಟ್ಟಿದೆ. ಈ ವಿಷಯದಲ್ಲಿ ಶ್ರೀಮಾತೆಯವರ ಶ್ರೀಮುಖದಿಂದ ಹೊರ ಬಂದ ಅಮೃತದಂತಹ ವಾಣಿಯ ಪವಿತ್ರತೆಯನ್ನು ರಕ್ಷಿಸಲು ಹಾಗೂ ಅವರ ಭಾಷೆಯನ್ನು ಹೇಗಿದೆಯೋ ಹಾಗೆಯೇ ಉಳಿಸಿ ಕೊಳ್ಳಲು ನಾನು ಸಮರ್ಥನಾಗಿದ್ದರೆ, ಅದು ಕೇವಲ ಅವರ ಕೃಪೆ ಯಿಂದಾಗಿ ಮಾತ್ರ ಸಾಧ್ಯವಾಯಿತು; ಎಲ್ಲಾದರೋ ಕೊರತೆ ಅಥವಾ ದೋಷವುಂಟಾಗಿದ್ದರೆ ಅವೆಲ್ಲವೂ ನನ್ನದು.

ಶ್ರೀಮಾತೆಯವರ ಶ್ರೀಚರಣಗಳಲ್ಲಿ ಪ್ರಣಾಮಗಳು. ಶ್ರೀ ಠಾಕೂರರ ಶ್ರೀಚರಣಗಳಲ್ಲಿ ಪ್ರಣಾಮಗಳು. ಶ್ರೀಮಾತೆ ಹಾಗೂ ಶ್ರೀಠಾಕೂರರ ಶಿಷ್ಯಂದಿರ ಚರಣಗಳಲ್ಲಿ ಪ್ರಣಾಮಗಳು!

*(ಮುಂದುವರಿಯುವುದು)*

## ಅತ್ಯುತ್ತಮವಾದ ಪೂಜೆ

**ಮಾಮೇವ ಸರ್ವಭೂತೇಷು ಬಹಿರಂತರಪಾವೃತಮ್ ।**
**ಈಕ್ಷೇತಾತ್ಮನಿ ಚಾತ್ಮಾನಂ ಯಥಾ ಖಮಮಲಾಶಯಃ ॥**

ಎಲ್ಲ ಜೀವಿಗಳಲ್ಲೂ ತನ್ನಲ್ಲೂ ಆಕಾಶದಂತೆ ಒಳಹೊರಗೆ ತುಂಬಿಕೊಂಡಿರುವ, ಆತ್ಮವೇ ಆದ ನನ್ನನ್ನು ಪರಿಶುದ್ಧವಾದ ಮನಸ್ಸಿನಿಂದ ನೋಡಬೇಕು.

**ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ।**
**ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯವೃತ್ತಿಭಿಃ ॥**

ಮನಸ್ಸು, ಮಾತು ಮತ್ತು ದೇಹ ಇವುಗಳ ಮೂಲಕ ಎಲ್ಲ ಜೀವಿಗಳಲ್ಲೂ ನನ್ನನ್ನೇ ನೋಡುವುದೇ ಅತ್ಯುತ್ತಮವಾದ ರೀತಿಯ ಪೂಜೆ.

*(ಶ್ರೀಮದ್ಭಾಗವತದ 'ಉದ್ಧವಗೀತೆ'ಯಲ್ಲಿ ಶ್ರೀಕೃಷ್ಣ)*

# ಸ್ಫೂರ್ತಿದಾಯಕ ನೀತಿಕಥೆಗಳು

ಮೂಲ: **'ಪ್ರೇರಕ ಪ್ರಸಂಗ'**, ಹಿಂದೀ ಗ್ರಂಥ ಅನುವಾದ: **ಡಾ. ಕೆ. ಅನಂತರಾಮು**

ನೈತಿಕ ಕಥೆಗಳು ಕೇವಲ ಆನಂದವನ್ನು ನೀಡುವುದಷ್ಟೇ ಅಲ್ಲ, ಓದುಗನನ್ನು ಅರಿವಿಲ್ಲದೆಯೇ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತವೆ. ನಾಗಪುರ ಆಶ್ರಮದಿಂದ ಪ್ರಕಟವಾದ ಹಿಂದೀ ಗ್ರಂಥದಿಂದ ಆಯ್ದ ನೈತಿಕ ಕಥೆಗಳು ಇಲ್ಲಿವೆ. ಅನುವಾದಕರು ಕನ್ನಡದ ಪ್ರಸಿದ್ಧ ಬರಹಗಾರರು. ನಿವೃತ್ತ ಪ್ರಾಧ್ಯಾಪಕರಾಗಿರುವ ಅವರು ತಮ್ಮ ಅನೇಕ ಗ್ರಂಥಗಳು ಹಾಗೂ ಲೇಖನಗಳಿಂದ ಈಗಾಗಲೇ ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಉತ್ತಮ ಭಾಷಣಕಾರರೂ ಆಗಿರುವ ಅವರು 'ವಿವೇಕ ಪ್ರಭ'ದಲ್ಲಿ ಹಲವು ಲೇಖನಗಳನ್ನೂ, ಸರಣಿ ಲೇಖನಗಳನ್ನೂ ಬರೆದಿದ್ದಾರೆ.

## ಮೂರ್ತಿ ಮತ್ತು ಕೀರ್ತಿ

ಅಲೆಗ್ಸಾಂಡರನು ಗ್ರೀಕ್ ಮತ್ತು ಮ್ಯಾಸಿಡೋನಿಯಾ ರಾಜ್ಯಗಳಿಗೆ ದೊರೆಯಾಗಿದ್ದನು. ಬ್ಯಾಬಿಲೋನ್ ಎಂಬುದು ಅವನ ರಾಜಧಾನಿಯಾಗಿತ್ತು. ಅತ್ಯಂತ ವೀರಪುರುಷನಾಗಿದ್ದ ಅವನು ಜಗತ್ತನ್ನೇ ತನ್ನ ತೋಳ್ಬಲದಿಂದ ಗೆದ್ದುಬಿಡಬೇಕೆಂಬ ಮಹತ್ವಾಕಾಂಕ್ಷೆಯಿಂದ ತುಂಬಿತುಳುಕುತ್ತಿದ್ದನು. ಆ ದಿಕ್ಕಿನಲ್ಲಿ ಅವನು ಒಂದಿಷ್ಟು ಯಶಸ್ಸನ್ನೂ ಗಳಿಸಿದ್ದನು. ರಾಜಧಾನಿಯ ತನ್ನ ಅರಮನೆಗೆ ಹೊಂದಿಕೊಂಡಂತೆ ಕಲಾಭವನ, ಅತಿಥಿಗೃಹಗಳು, ಉದ್ಯಾನವನ ಮುಂತಾದವನ್ನೆಲ್ಲ ಅಭೂತಪೂರ್ವವೆಂಬಂತೆ ನಿರ್ಮಿಸಿಕೊಂಡಿದ್ದನು. ಆ ರಾಜೋದ್ಯಾನದಲ್ಲಿ ತಾನು ಮೆಚ್ಚಿಕೊಂಡ ಪುರಾತನ ಹಾಗೂ ಸಮಕಾಲೀನ ವೀರಪುರುಷರ ಶಿಲಾಮೂರ್ತಿಗಳನ್ನು ಕಡೆಯಿಸಿ ಪ್ರತಿಷ್ಠಾಪಿಸಿದ್ದನು. ಅವುಗಳನ್ನು ನೋಡುವಾಗಲೆಲ್ಲ ಅವನ ಮನಸ್ಸಿನಲ್ಲಿ ದಿಗ್ವಿಜಯದ ಅಲೆಗಳು ಉಕ್ಕಿಹರಿಯುತ್ತಿದ್ದವು.



ಒಮ್ಮೆ ಪರದೇಶದಿಂದ ಗಣ್ಯಅತಿಥಿಯೊಬ್ಬನು ಅಲೆಗ್ಸಾಂಡರನ ರಾಜಧಾನಿಯ ದರ್ಶನ ಮಾಡುವ ಉದ್ದೇಶದಿಂದಲೇ ಆಗಮಿಸಿದನು. ದೊರೆಯೇ ಮುಂದೆ ನಿಂತು ಅವನನ್ನು ಸ್ವಾಗತಿಸಿ, ತನ್ನ ಅರಮನೆಯ ಅತಿಥಿಗೃಹದಲ್ಲಿ ಬೀಡುಬಿಡಿಸಿ, ಸತ್ಕಾರಕ್ಕೆ ಏರ್ಪಾಟು ಮಾಡಿದನು. ಆ ಅತಿಥಿಯಾದರೋ ಬ್ಯಾಬಿಲೋನ್ ನಗರದ ವೈಭವವನ್ನೆಲ್ಲ ಕಂಡು ಆನಂದ ತುಂದಿಲನಾದನು. ಎಲ್ಲವೂ ಆದ ಬಳಿಕ ಅಲೆಗ್ಸಾಂಡರನು ತಾನೇ ಖುದ್ದಾಗಿ ಆ ಅತಿಥಿಗೆ ತನ್ನ ರಾಜೋದ್ಯಾನದ ದರ್ಶನ ಮಾಡಿಸಿದನು. ನಳನಳಿಸುವ ವೃಕ್ಷಲತಾಪಲ್ಲವಗಳಿಂದಲೂ ಪುಷ್ಪವಾಟಿಕೆಗಳಿಂದಲೂ ಫಲಭರಿತ ವೃಕ್ಷರಾಜಿಯಿಂದಲೂ ತಂಪು ನೆರಳಿನ ತೋಪುಗಳಿಂದಲೂ ಕಾರಂಜಿಯ ಕೊಳಗಳಿಂದಲೂ ಶೋಭಾಯಮಾನವಾಗಿದ್ದ ಇಂದ್ರನ ನಂದನವನವನ್ನೂ ನಾಚಿಸುವಂತಿದ್ದ ಆ ಉದ್ಯಾನವನ್ನು ಕಂಡ ಅತಿಥಿಯು ತದೇಕಚಿತ್ತನಾಗಿ ನೋಡಿದನು. ಹಾಗೆ ನೋಡುವಾಗ, ''ಇದು ಯಾವ ವೀರನ ಪ್ರತಿಮೆ, ಅದು ಯಾವ ವೀರನ ಪ್ರತಿಮೆ, ಅವನಾರು, ಇವನಾರು?'' ಎಂದು ಉದ್ದಕ್ಕೂ ಪ್ರಶ್ನಿಸುತ್ತಲೇ ಇದ್ದನು. ಅಲೆಗ್ಸಾಂಡರನೇ ಆ ವೀರಪುರುಷರನ್ನೆಲ್ಲ ಬಣ್ಣಿಸುತ್ತಿದ್ದನು. ಕೊನೆಯಲ್ಲಿ ಆ ಅತಿಥಿಯು, ''ಎಲ್ಲವೂ ಸರಿಯೆ, ವೀರಪುಂಗವರಾದ ನಿಮ್ಮ ಪ್ರತಿಮೆಯೇ ಇಲ್ಲಿ ಕಾಣಿಸುತ್ತಿಲ್ಲವಲ್ಲ, ಏಕೆ ಮಹಾರಾಜರೇ'' ಎಂದು ಕೇಳಿದನು.

ಆಗ ಅಲೆಗ್ಸಾಂಡರನು, ''ನನ್ನದೊಂದು ಮೂರ್ತಿಯನ್ನು ಇಲ್ಲಿ ಪ್ರತಿಷ್ಠಾಪನೆ ಮಾಡಿದೆನೆಂದಿಟ್ಟುಕೊಳ್ಳಿ, ಆಗ ಮುಂದಿನ ಪೀಳಿಗೆಯವರು, ಈಗ ನೀವು ಕೇಳಿದಂತೆಯೇ, ನನ್ನ ಪ್ರತಿಮೆಯನ್ನು ಕಂಡಾಗ 'ಇದು ಯಾರ ಪ್ರತಿಮೆ?' ಎಂದು ಪ್ರಶ್ನಿಸಬಹುದು, ಉತ್ತರವನ್ನೂ ಪಡೆಯಬಹುದು. ಆದರೆ ಅದು ನನಗೆ ಇಷ್ಟವಿಲ್ಲ. ನಾನು ನನ್ನ ಸಾಹಸಮಯ ದಿಗ್ವಿಜಯಗಳಿಂದ ಎಲ್ಲರ ನಾಲಿಗೆಯಲ್ಲೂ ನಲಿಯುವಂತಾಗಬೇಕು. ಈ ಉದ್ಯಾನವನಕ್ಕೆ ಬಂದವರು ನೀವು ಕೇಳಿದಂತೆಯೇ 'ಅಲೆಗ್ಸಾಂಡರನ ಪ್ರತಿಮೆ ಏಕಿಲ್ಲ?' ಎಂದು ಪ್ರಶ್ನಿಸುವಂತಾಗಬೇಕು'' ಎಂದು ಉತ್ತರಿಸಿದನು.

ಸಾಧನೆಯ ಬಲದಿಂದ ಕೀರ್ತಿಶಾಲಿಯಾಗಬೇಕೇ ಹೊರತು ನಾನೇ ಬಣ್ಣಿಸಿಕೊಂಡೋ ಅನ್ಯರು ಬಣ್ಣಿಸಿಯೋ ಶಾಶ್ವತವಾದ ಕೀರ್ತಿಗೆ ಪಾತ್ರನಾಗುವುದು ಸಾಧ್ಯವಿಲ್ಲ ಎಂಬುದನ್ನು ಈ ವೃತ್ತಾಂತವು ನಿರ್ದೇಶಿಸುತ್ತಿದೆ.

## ಬೆಳಕಿನಿಂದ ಬೆಳಕಿಗೆ

ಭಗವಾನ್ ಬುದ್ಧದೇವನು ಜೀವಿತದಲ್ಲಿ ಪ್ರವಚನ ನೀಡುತ್ತಿದ್ದಾಗ, ಶ್ರೀಸಾಮಾನ್ಯರಲ್ಲದೆ ಅಲ್ಲಿ ಹಲವು ಗಣ್ಯರೂ ನೆರೆದು ಆರ್ತಿಯಿಂದ ಆಲಿಸುತ್ತಿದ್ದರು. ಒಂದು ದಿನ ಹೀಗೆಯೇ ಪ್ರವಚನ ಮುಗಿದ ಬಳಿಕ ಎಲ್ಲರೂ ಸ್ವಾಮಿಗೆ ಅಡ್ಡಬಿದ್ದು ತಂತಮ್ಮ



ದಾರಿ ಹಿಡಿದು ಹೊರಟುಹೋದರು. ನಂದಪುತ್ರನೆಂಬ ದೊರೆಯು ಮಾತ್ರ ಅಲುಗಾಡದೆ ಅಂದು ಅಲ್ಲಿಯೇ ಕುಳಿತಿದ್ದನು. ಅದನ್ನು ಕಂಡ ಬುದ್ಧದೇವನು ''ಏನು ವಿಚಾರ ನಂದಪುತ್ರ, ನನ್ನಿಂದೇನಾಗಬೇಕು?'' ಎಂದು ತಾನೇ ಕೇಳಿದನು. ''ಕತ್ತಲೆಯಿಂದ ಕತ್ತಲೆಗೆ ಹೋಗುವವರು, ಕತ್ತಲೆಯಿಂದ ಬೆಳಕಿಗೆ ಹೋಗುವವರು, ಬೆಳಕಿನಿಂದ ಕತ್ತಲೆಗೆ ಹೋಗುವವರು, ಬೆಳಕಿನಿಂದ ಬೆಳಕಿಗೆ ಹೋಗುವವರು ಎಂದು ಲೋಕದಲ್ಲಿ ನಾಲ್ಕು ವಿಧದ ಜನರಿದ್ದಾರೆ ಎಂದು ಈಗ ನೀನು ಹೇಳಿದೆಯಲ್ಲ; ದಯಮಾಡಿ ಅದನ್ನು ಸ್ವಲ್ಪ ವಿವರಿಸಿ ಹೇಳು ತಂದೆ'' ಎಂದು ನಂದಪುತ್ರನು ಜಿಜ್ಞಾಸುವಾಗಿ ಬೇಡಿದನು.

ಅಜ್ಞಾನವೆಂಬ ಕತ್ತಲೆಯಲ್ಲಿರುತ್ತ, ಬದುಕಿನ ಪರ್ಯಂತ ದುಷ್ಕರ್ಮಗಳನ್ನು ಮಾಡುತ್ತ, ಕೊಲೆ, ಹಿಂಸೆ, ಲೂಟಿ, ಕಳ್ಳತನ, ವಂಚನೆ ಮುಂತಾದವುಗಳಲ್ಲೇ ಯಾರು ತಮ್ಮ ಬದುಕನ್ನೆಲ್ಲ ಹಾಳು ಮಾಡಿಕೊಂಡುಬಿಡುತ್ತಾರೋ – ಅಂತಹವರು ಕತ್ತಲೆಯಿಂದ ಕತ್ತಲೆಗೆ ಹೋಗುವವರಾಗಿದ್ದಾರೆ.

ಜ್ಞಾನವೆಂಬ ಬೆಳಕಿನ ವಾತಾವರಣದಲ್ಲಿಯೇ ಇದ್ದರೂ, ಸತ್ಕರ್ಮಗಳಲ್ಲಿ ನಿರತರಾಗಬಹುದಾಗಿದ್ದರೂ, ಸದಾಚಾರಿಗಳಾಗಿ ಜೀವನ ನಡೆಸಬಹುದಾಗಿದ್ದರೂ, ಅವುಗಳನ್ನು ಸದುಪಯೋಗ ಮಾಡಿಕೊಳ್ಳದೆ, ಯಾರು ದುರಾಚಾರಿಗಳಾಗಿಯೇ ತಮ್ಮ ಬದುಕನ್ನು ಕಳೆದುಬಿಡುತ್ತಾರೋ ಅಂತಹವರು ಬೆಳಕಿನಿಂದ ಕತ್ತಲೆಯ ಕಡೆಗೆ ಹೋಗುವವರಾಗಿದ್ದಾರೆ.

ಜ್ಞಾನವೆಂಬ ಬೆಳಕಿನ ವಾತಾವರಣದಲ್ಲಿರುತ್ತ, ಅನವರತವೂ ಸದ್ವಿಚಾರ ಚಿಂತನೆಗೆ, ಸತ್ಸಂಗಕ್ಕೆ, ಸತ್ಕರ್ಮ ಸದಾಚಾರಗಳಿಗೆ ಯಾರು ತಮ್ಮ ಬದುಕನ್ನೆಲ್ಲ ಮೀಸಲಾಗಿಟ್ಟು ಸಾಧುಜೀವನ ನಡೆಸುತ್ತಾರೋ – ಅಂತಹವರು ಬೆಳಕಿನಿಂದ ಬೆಳಕಿನೆಡೆಗೆ ಹೋಗುವವರಾಗಿದ್ದಾರೆ ಎಂದು ಬುದ್ಧದೇವನು ವಿನಂತಿಸಿದನು. ಅದನ್ನು ಶ್ರವಣಮಾಡಿದ ನಂದಪುತ್ರನು, ''ನಾನು ಧನ್ಯನಾದೆ ತಂದೆ, ಬದುಕಿನ ಮಂಗಳದ ಹಾದಿಯನ್ನು ಕಂಡುಕೊಂಡೆ'' ಎಂದು ನಮಸ್ಕರಿಸಿ ನಡೆದನು.

ಕಣ್ಣಿಟ್ಟು ನೋಡಿದರೆ ನಮಗೂ ಲೋಕದಲ್ಲಿ ಬುದ್ಧದೇವನು ವಿವರಿಸಿದ ನಾಲ್ಕು ರೀತಿಯ ಮನುಷ್ಯರು ಕಾಣಸಿಗುತ್ತಾರೆ. ನಾವು ನಾಲ್ಕನೆಯ ಗುಂಪಿನ ಪ್ರತಿನಿಧಿಗಳಾಗಬೇಕಾಗಿದೆ. ಬೆಳಕಿನಲ್ಲೇ ಹುಟ್ಟಿದ್ದೇವೆ, ಬೆಳಕಿನಲ್ಲಿಯೇ ಬಾಳುತ್ತಿದ್ದೇವೆ, ಕೊನೆಗೆ ಬೆಳಕನ್ನೇ ಸೇರಿಹೋಗುತ್ತೇವೆ ಎಂಬ ನಿಶ್ಚಯವನ್ನು ತಾಳಬೇಕಾಗಿದೆ.

## ಶಿವಾಜಿಗೆ ಮಾತೆಯರೆಲ್ಲ ಜಗನ್ಮಾತೆಯರು

ಭರತಖಂಡದ ವೀರಶಿರೋಮಣಿಗಳಲ್ಲಿ ಒಬ್ಬನಾಗಿದ್ದ ಶಿವಾಜಿ ಮಹಾರಾಜನು ಮೊಗಲರು ವಶಪಡಿಸಿಕೊಂಡಿದ್ದ ಒಂದೊಂದೇ ಕೋಟೆಯನ್ನು ಅವರಿಂದ ಬಿಡಿಸಿಕೊಳ್ಳುತ್ತ, ದಿಗ್ವಿಜಯದ ಹಾದಿಯಲ್ಲಿ ಸಾಗುತ್ತಿದ್ದನು. ಶೌರ್ಯಸಾಹಸಗಳಲ್ಲಿ ಶಿವಾಜಿಗೆ ಸರಿದೊರೆಯಾಗಿದ್ದ ಸೇನಾಧಿಪತಿಯೊಬ್ಬನು ಶಿವಾಜಿಯ ಅನುಪಸ್ಥಿತಿಯಲ್ಲಿ , ಅವನ ಅಜ್ಞೆಯಂತೆ, ತಾನೇ ಸೈನ್ಯವನ್ನು ಮುನ್ನಡೆಸುತ್ತ ಕಲ್ಯಾಣವೆಂಬ ದುರ್ಗವನ್ನು ಗೆದ್ದುಕೊಂಡನು. ವಿಜಯದ ಜೊತೆಗೆ ಬೇಕಾದ ಹಾಗೆ ಶಸ್ತ್ರಾಸ್ತ್ರಗಳೂ ಅಲ್ಲಿ ಸಿಕ್ಕಿದವು. ದ್ರವ್ಯಸಂಪತ್ತೂ ಸಾಕಷ್ಟು ದಕ್ಕಿತು. ಅಷ್ಟೇ ಸಾಲದೆಂಬಂತೆ ಆ ಕೋಟೆಯ ರಕ್ಷಣಾಧಿಕಾರಿಯ ಸೊಸೆಯಾಗಿದ್ದ ಅಪ್ರತಿಮ ಸುಂದರಿಯೊಬ್ಬಳು ಅವನ ಕೈಗೆ ಸಿಕ್ಕಿಬಿದ್ದಳು. ದಳಪತಿಯು ಆಕೆಯನ್ನು ಗೌರವದಿಂದ ಒಂದು ಅಲಂಕೃತ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು, ಸುತ್ತಲೂ ಪರದೆಯನ್ನು ಇಳಿಬಿಟ್ಟು, ಶಿವಾಜಿಯ ಸಮ್ಮುಖಕ್ಕೆ ಕರೆತಂದನು. ಆ ಹೊತ್ತಿನಲ್ಲಿ ಶಿವಾಜಿ ತನ್ನ ಆಪ್ತರೊಡನೆ ರಾಜ್ಯಾಡಳಿತದ ಸಂಬಂಧವಾಗಿ ಪರಾಮರ್ಶೆ ನಡೆಸುತ್ತಿದ್ದನು.

ತಾನು ಸಾಧಿಸಿದ ವಿಜಯದ ಅಗ್ಗಳಿಕೆಯನ್ನು ಬಣ್ಣಿಸುತ್ತ ಆ ಸೇನಾಪತಿಯು, ತಾನು ವಶಪಡಿಸಿಕೊಂಡು ತಂದಿದ್ದ ಶಸ್ತ್ರಾಸ್ತ್ರಗಳನ್ನೂ, ದ್ರವ್ಯರಾಶಿಯನ್ನೂ, ಶಿವಾಜಿಯ ಮುಂದೆ ಸುರಿದನು. ಎಲ್ಲರ ಕಣ್ಣುಗಳೂ ಕೋರೈಸಿದವು. 'ಭಲೇ, ಭೇಷ್' ಎಂದು ಶಿವಾಜಿಯು ಆ ದಳಪತಿಯ ಪರಾಕ್ರಮವನ್ನು ಕೊಂಡಾಡಿದನು. ತರುವಾಯ ಶಿವಾಜಿಯು ಆ ಪಲ್ಲಕ್ಕಿಯಲ್ಲಿ ಇರುವುದೇನು ಎಂದು ಅದರತ್ತ ಕೈತೋರಿಸಿ ಕೇಳಿದನು. ''ಕಲ್ಯಾಣದುರ್ಗದಲ್ಲಿ ಕೈವಶವಾದ ಒಂದು ಅಪೂರ್ವ ರತ್ನವನ್ನು ನಿಮಗೆ ಉಡುಗೊರೆಯಾಗಿ ಒಪ್ಪಿಸಲು ತಂದಿದ್ದೇನೆ. ತಾವೇ ಬಂದು ನೋಡಬೇಕು, ಸ್ವೀಕರಿಸಬೇಕು'' ಎಂದು ದಳಪತಿಯು ಬಿನ್ನೈಸಿಕೊಂಡನು.

ಶಿವಾಜಿಯು ಮೇಲೆದ್ದು ಆ ಅಲಂಕೃತ ಪಲ್ಲಕ್ಕಿಯ ಪರದೆಯನ್ನು ಸರಿಸಿದಾಗ, ಅದರಲ್ಲಿ ಪರಮಸುಂದರಿಯಾದ ಮೊಗಲ್ ಯುವತಿಯನ್ನು ಕಂಡು ದಂಗಾದನು. ಸಂಕೋಚದಿಂದ ತಲೆ ತಗ್ಗಿಸುತ್ತ, ''ಆಹಾ ಏನು ಚೆಲುವು, ಏನು ಯೌವನ! ನನ್ನ ತಾಯಿಯೂ ಇಷ್ಟು ರೂಪವತಿಯಾಗಿದ್ದರೆ ನಾನು ಇನ್ನಷ್ಟು ಸುಂದರನಾಗುತ್ತಿದ್ದೆನಲ್ಲವೆ'' ಎಂದು ಉದ್ಗರಿಸುತ್ತ ಸೇನಾಪತಿಯತ್ತ ಮುಖಮಾಡಿ, ''ನೀನು ನನ್ನ ಸಾಹಚರ್ಯದಲ್ಲಿ ಅಷ್ಟು



ವರ್ಷಗಳಿಂದಿದ್ದು ಏನು ಪ್ರಯೋಜನವಾಯಿತು? ನನ್ನ ಸ್ವಭಾವವನ್ನು ಅರಿತರೂ ನೀನು ಹೀಗೆ ಮಾಡುವುದೆ? ಶಿವಾಜಿಯು ಅನ್ಯ ಗೃಹಸ್ಥರ ಪುತ್ರಿಯರನ್ನೂ ಸೊಸೆಯರನ್ನೂ ತನ್ನ ತಾಯಿಗೆ ಸಮಾನರೆಂಬಂತೆ ಕಾಣುತ್ತಾನೆಂಬುದನ್ನು ನೀನು ಅರಿಯೆಯಾ?'' ಎಂದು ಝೇಂಕರಿಸಿದನು. ಮತ್ತೆ ತಾನೇ ಮುಂದುವರಿದು, ''ಈಕೆಯನ್ನು ಹೇಗೆ ಗೌರವಪೂರ್ವಕವಾಗಿ ನನ್ನ ಬಳಿಗೆ ಕರೆತಂದೆಯೋ, ಹಾಗೆಯೇ ಗೌರವದಿಂದ ಅವಳನ್ನು ಬಳುವಳಿ ಸಹಿತವಾಗಿ, ಅವಳ ಪೋಷಕರ ವಶಕ್ಕೆ ಒಪ್ಪಿಸಿ ಬಂದುಬಿಡು'' ಎಂದು ಆಜ್ಞಾಪಿಸಿಯೂಬಿಟ್ಟನು.

'ಮಾತೃವತ್ ಪರದಾರಾಂಶ್ಚ' ಪರಸ್ತ್ರೀಯರನ್ನು ತಾಯಿಯರಂತೆ ಕಾಣಬೇಕು – ಎಂಬುದು ಮಹಾಭಾರತದ ನೀತಿವಾಕ್ಯವಾಗಿದೆ. ಅದು ಸನಾತನ ಹಿಂದೂ ಸಂಸ್ಕೃತಿಯ ಜೀವನಾದರ್ಶಗಳಲ್ಲೊಂದು. ಅಂತಹ ಶ್ರೇಷ್ಠ ಮೌಲ್ಯವನ್ನು ಎತ್ತಿಹಿಡಿದ ಕೀರ್ತಿ ಶಿವಾಜಿ ಮಹಾರಾಜನಿಗೆ ಸಲ್ಲುತ್ತದೆ. 'ಮಾತೆಯರೆಂದರೆ ಸುಮ್ಮನಾಗಲಿಲ್ಲ, ಅವರು ಜಗನ್ಮಾತೆಯರಪ್ಪಾ' ಎಂಬ ಶ್ರೀರಾಮಕೃಷ್ಣ ಪರಮಹಂಸರ ವಾಣಿಗೂ ಇದು ಅನುಗುಣವಾಗಿಯೇ ಇದೆ. ಜಗತ್ತಿನಲ್ಲಿ ಅದಷ್ಟೋ ಸಂಸ್ಕೃತಿಗಳು ವಿಜೃಂಭಿಸಿ, ಕಾಲಗರ್ಭದಲ್ಲಿ ಮರೆಯಾಗಿಬಿಟ್ಟಿವೆ. ಇನ್ನು ಕೆಲವು, ಹಾಗೆ ಮರೆಯಾಗುವ ದಿಕ್ಕಿನಲ್ಲಿ ಸಾಗುತ್ತಲೂ ಇವೆ. ಆದರೆ ಸನಾತನ ಹಿಂದೂ ಸಂಸ್ಕೃತಿಯು ಮಾತ್ರ ಅನಾದಿಕಾಲದಿಂದ ಇಂದಿನವರೆಗೂ ಅಳಿಯದೆ ಉಳಿದು ಬಂದಿರುವುದಕ್ಕೆ, ಅದು ಈ ಪರಿಯ ಸದಾಚಾರಗಳನ್ನು ತನ್ನಲ್ಲಿ ನೆಲೆಗೊಳಿಸಿಕೊಂಡಿರುವುದೇ ಕಾರಣವಾಗಿದೆ. ಈ ಸನಾತನ ಹಿಂದೂ ಸಂಸ್ಕೃತಿಯು ಈ ಭೂಮಂಡಲದಿಂದ ಅಳಿದು ಹೋದಂದು ಜಗತ್ತು ಪ್ರಳಯವನ್ನು ಕಾಣುತ್ತದೆ ಎಂಬ ಸ್ವಾಮಿ ವಿವೇಕಾನಂದರ ವಾಣಿಯನ್ನು ಈ ಹೊತ್ತಿನಲ್ಲಿ ನೆನಪಿಗೆ ತಂದುಕೊಳ್ಳಬೇಕು.

## ಶುದ್ಧಮನದ ಕ್ಷಮಾಗುಣ

ಪುರಾತನ ಗ್ರೀಸ್ ದೇಶದಲ್ಲಿ ಪೊಯೇಮನ್ ಎಂಬ ಹೆಸರಿನ ಸಂತನೊಬ್ಬನಿದ್ದನು. ಅವನು ತನ್ನಲ್ಲಿಗೆ ಬರುತ್ತಿದ್ದ ಜಿಜ್ಞಾಸುಗಳಿಗೆ ತನ್ನ ಹಿತವಚನಗಳಿಂದ ಸೂಕ್ತವಾದ ಮಾರ್ಗದರ್ಶನ ನೀಡುತ್ತಿದ್ದನು. ಹಾಗೆಯೇ ಕೆಲವರು ತಮ್ಮ ಸುಖದುಃಖಗಳನ್ನು ಹೇಳಿಕೊಳ್ಳುವ ಸಲುವಾಗಿಯೂ ಅವನಲ್ಲಿಗೆ ಬರುತ್ತಿದ್ದರು.

ಒಂದು ದಿನ ಸುಕೋವಾ ಎಂಬ ರೈತನೊಬ್ಬನು ಸಂತನಲ್ಲಿಗೆ ಬಂದು, ''ಸ್ವಾಮಿ, ನನ್ನ ತಮ್ಮನು ಬಹಳ ದುಷ್ಟಸ್ವಭಾವದವನಾಗಿದ್ದಾನೆ. ಅವನಿಗೆ ನನ್ನನ್ನೂ ಕಂಡರಾಗದು. ಸದಾ ನನ್ನ ಮೇಲೆ ವಿಷಕಾರುತ್ತಲೇ ಇರುತ್ತಾನೆ. ಅಷ್ಟಾದರೂ ನಾನು 'ತಮ್ಮನಲ್ಲವೇ' ಎಂಬ ಸದ್ಭಾವನೆಯಿಂದ ಅವನ ತಪ್ಪುಗಳನ್ನು ಕ್ಷಮಿಸುತ್ತೇನೆ. ನಾನು ಹೀಗೆಲ್ಲ ತಪ್ಪು ಮಾಡಿದರೂ ಅಣ್ಣನು ಕ್ರೋಧಗೊಳ್ಳದೆ ನನ್ನನ್ನು ಕ್ಷಮಿಸುತ್ತಲೇ ಇದ್ದಾನಲ್ಲ; ಅವನದು ದೊಡ್ಡಗುಣ, ನನ್ನನ್ನು ನಾನು ತಿದ್ದಿಕೊಳ್ಳಬೇಕು ಎಂಬ ಭಾವನೆ ನನ್ನ ತಮ್ಮನ ಮನಸ್ಸಿನಲ್ಲಿ ಸುಳಿಯುವುದೇ ಇಲ್ಲವಲ್ಲ ; ನನ್ನ ಕ್ಷಮಾಗುಣವು ಅವನ ಮೇಲೆ ಯಾವುದೇ ಪರಿಣಾಮವನ್ನೂ ಬೀರುತ್ತಲೇ ಇಲ್ಲವಲ್ಲ ; ಇದಕ್ಕೇನು ಮಾಡುವುದು?'' ಎಂದು ಅಲವತ್ತುಗೊಂಡನು.

ಆಗ ಆ ಸಂತನು, ''ನೋಡಪ್ಪಾ, ನೀನು ನಿನ್ನ ತಮ್ಮನನ್ನು ಕ್ಷಮಿಸುವಾಗಲೆಲ್ಲ , 'ನನ್ನದೇನೂ ತಪ್ಪಿಲ್ಲ , ತಪ್ಪೆಲ್ಲವೂ ನನ್ನ ತಮ್ಮನದೇ, ಆದರೂ ನಾನು ಅವನನ್ನು ಕ್ಷಮಿಸುತ್ತಿದ್ದೇನೆ' ಎಂಬ ಭಾವನೆಯನ್ನಿಟ್ಟುಕೊಂಡು ಕೆಲಸಮಾಡುತ್ತಿದ್ದೀಯೆ. ಅದಕ್ಕೆ ಬದಲಾಗಿ 'ನನ್ನಲ್ಲಿಯೂ ಏನಾದರೂ ದೋಷಗಳಿರಬಹುದು, ಆದ್ದರಿಂದಲೇ ನನ್ನ ತಮ್ಮನೂ ತಪ್ಪಿ ನಡೆಯುತ್ತಿದ್ದಾನೆ. ನನ್ನನ್ನೂ ನಾನು ಸ್ವಲ್ಪ ತಿದ್ದಿಕೊಳ್ಳಬೇಕಾಗಿದೆ' ಎಂಬ ಭಾವನೆಯಿಂದ ನೀನು ಕ್ಷಮಿಸಲು ಪ್ರಾರಂಭಿಸು. ನಿನ್ನ ಕ್ಷಮಾಗುಣವು ನಿರ್ಮಲವಾಗಿದ್ದು , ಅದು ಪರಮಾತ್ಮನಿಗೂ ಪ್ರಿಯವಾಗುವಂತಿದ್ದರೆ ಖಂಡಿತವಾಗಿಯೂ ನಿನ್ನ ತಮ್ಮನು ಪ್ರಭಾವಿತನಾಗಿ ಸುಧಾರಣೆಗೊಳ್ಳುತ್ತಾನೆ. ವಿವೇಕವಿಲ್ಲದವರನ್ನು ಕ್ಷಮಿಸುವುದು ನಮ್ಮ ಕರ್ತವ್ಯ. ನಿನ್ನ ಕ್ಷಮೆಯು ನಿರ್ಮಲ ಹೃದಯದಿಂದ ಮೂಡಿ ಬರುತ್ತಿದೆಯೋ ಅಥವಾ ಧಿಕ್ಕಾರಭಾವನೆಯಿಂದ ಮಲಿನಗೊಂಡಿರುತ್ತದೆಯೋ ಎಂಬುದನ್ನೀಗ ನೀನು ನಿನ್ನ ಎದೆಮುಟ್ಟಿ ನನಗೆ ಹೇಳು'' ಎಂದನು. ಆಗ ಸುಕೋವನು ತನ್ನನ್ನು ತಾನು ವಂಚಿಸಿಕೊಳ್ಳದೆ, ''ಹೌದು ಸ್ವಾಮಿ, ನೀವು ಹೇಳುವುದು ನಿಜ, ನನ್ನನ್ನು ತಿದ್ದಿಕೊಂಡೇ ಮುಂದುವರೆಯುತ್ತೇನೆ'' ಎಂದು ಸಂತನಿಗೆ ಅಡ್ಡಬಿದ್ದು ಹೊರಟುಹೋದನು.

ಲೋಕದ ಡೊಂಕನ್ನು ತಿದ್ದಲು ಯತ್ನಿಸುವ ನಮ್ಮ ಡೊಂಕನ್ನು ಮೊದಲು ತಿದ್ದಿಕೊಳ್ಳಬೇಕು. ಇಲ್ಲದಿದ್ದರೆ ಅದು ಬೇರೆಯವರ ಮೇಲೆ ಪ್ರಭಾವ ಬೀರುವುದಿಲ್ಲ. ಯಾರಲ್ಲದಿದ್ದರೂ ಭಗವಂತನು ನಮ್ಮ ಮನದ ನಿರ್ಮಲತೆಯನ್ನು ಅಳತೆ ಮಾಡುತ್ತಾನೆಂಬ ಎಚ್ಚರವಿರಬೇಕು.



# 'ನಿರ್ಭಯತೆ' : ಇದನ್ನು ಬೆಳೆಸಿಕೊಳ್ಳುವುದು ಹೇಗೆ ?

ಡಾ. ಡಿ.ಕೆ. ರಾಜೇಂದ್ರ

ದೀರ್ಘಕಾಲದ ಪರಕೀಯರ ಆಳ್ವಿಕೆಯ ದಾಸ್ಯದಿಂದ ಭಾರತೀಯರಿಗೆ ಬಂದೊದಗಿದ ಜಾಡ್ಯವನ್ನು ತೊಲಗಿಸಿ, ನಿರ್ಭೀತಿಯ ಕೆಚ್ಚನ್ನು ಎಲ್ಲರಲ್ಲೂ ತುಂಬಿ, ಅವರನ್ನು ಮಹತ್ಕಾರ್ಯಗಳನ್ನು ಮಾಡುವಂತೆ ಹುರಿದುಂಬಿಸಿದರು ಸ್ವಾಮೀಜಿ. ಅವರ ಉಪದೇಶಗಳ ಹಿನ್ನೆಲೆಯಲ್ಲಿ ಈ ವಿಷಯವಾಗಿ ಬರೆದಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಲೇಖಕರು.

**'ಭ**ಯ' – ಇಂದು ಇಡೀ ವಿಶ್ವವನ್ನು ಆವರಿಸಿರುವ ಒಂದು ಪೆಡಂಭೂತ. ಒಂದಲ್ಲ ಒಂದು ಬಗೆಯ ಭಯ, ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ವಯಸ್ಸಿನ, ಎಲ್ಲ ವರ್ಗದ ಜನರನ್ನೂ ಕಾಡ ತೊಡಗಿದೆ. ಯುವ ಶಕ್ತಿಯನ್ನು ಅಸ್ಥಿರಗೊಳಿಸಿ ಹಿನ್ನಡೆಯುವಂತೆ ಮಾಡುತ್ತಿರುವುದಲ್ಲದೆ, ಮುಪ್ಪಡರಿದವರನ್ನೂ ಅದು ಬಿಟ್ಟಿಲ್ಲ. ವೃದ್ಧಾಪ್ಯದ ಭಯ, ಸಾವಿನ ಭಯ, ಪಾಪಕರ್ಮಗಳ ಭಯ– ಹೀಗೆ ಹತ್ತು ಹಲವು ಸುತ್ತುವರೆದು ವೃದ್ಧಾಪ್ಯವನ್ನು ಮತ್ತಷ್ಟು ಹಣ್ಣಾಗಿಸಿವೆ. ಬಸವಣ್ಣನವರು 'ದಯವೇ ಧರ್ಮದ ಮೂಲ' ಎಂದು ಹೇಳಿ ಅದಕ್ಕೊಂದು ವಿಶಾಲವಾದ ಅರ್ಥವನ್ನು, ಮೌಲ್ಯವನ್ನು ತಂದುಕೊಟ್ಟರು. ಆದರೆ ಅದನ್ನು ವಿಶ್ಲೇಷಿಸಿ ನೋಡುವುದಾದರೆ 'ದಯವೇ ಧರ್ಮದ ಮೂಲ' ಎನ್ನುವುದಕ್ಕಿಂತ 'ಭಯವೇ ಧರ್ಮದ ಮೂಲ' ಎಂಬಂತೆನಿಸುತ್ತದೆ. ಧರ್ಮದ ಸ್ವಲ್ಪಮಟ್ಟಿನ ಪಾಲನೆ ಭಯದಿಂದಲೇ ಆಗುತ್ತಿರುವಂತಹುದು. ಒಂದು ರೀತಿಯಲ್ಲಿ ಈ ಭಯ ಕೆಲವೊಂದು ನಿಯಮಗಳ ಪಾಲನೆಗೆ ಕಾರಣವಾದಂತಿದ್ದರೂ, ಮತ್ತೊಂದು ಬಗೆಯಲ್ಲಿ ಅದು ವ್ಯಕ್ತಿಯನ್ನು ಅಧೈರ್ಯಗೊಳಿಸುವಲ್ಲಿ, ಅಸ್ಥಿರಗೊಳಿಸುವಲ್ಲಿ ಮುಂದಾಗಿರುವುದು ದುರ್ದೈವದ ಸಂಗತಿ. ಏಕೆಂದರೆ ಅಂತಹ ಭಯ ವ್ಯಕ್ತಿಯನ್ನು ಅಶಕ್ತನನ್ನಾಗಿಸುವ ಬಹುದೊಡ್ಡ ಅಸ್ತ್ರವಾಗಬಲ್ಲದು.

ಎಲ್ಲ ಧರ್ಮಕಾರ್ಯಗಳ ಹಿಂದೆಯೂ ಅದಕ್ಕೆ ಪ್ರೇರಕವಾಗಿ ನಿಂತಿರುವುದು ಭಯ. ಆ ಭಯದಿಂದ ತಪ್ಪಿಸಿಕೊಳ್ಳಲು ಅಥವಾ ಅದರಿಂದ ಸ್ವಲ್ಪ ಪಾರಾಗಲು ಮನುಷ್ಯ ಆಗಾಗ ಇಂತಹ ಧರ್ಮಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ – ನಾವು ದೇವರಿಗೆ ತಪ್ಪುಕಾಣಿಕೆ ಹಾಕುವುದೂ ಇಂತಹ ಭಯದ ಕಾರಣದಿಂದಲೇ ಎಂದಾಗ ಅಚ್ಚರಿಪಡಬೇಕಾಗಿಲ್ಲ. ಆದರೆ, ದೇವರು ಅಥವಾ ಧರ್ಮವನ್ನು ಇಂತಹ ಆಮಿಷದಿಂದಾಗಲಿ, ಇಲ್ಲವೇ ತಪ್ಪುಕಲ್ಪನೆಯಿಂದಾಗಲಿ ಮೆಚ್ಚಿಸಲು ಅಥವಾ ವಂಚಿಸಲು ಸಾಧ್ಯವೆ? ಇದು ಪ್ರಶ್ನೆಯಾಗಿ ಎದುರಾಗುತ್ತದೆ.

ಅಷ್ಟಕ್ಕೂ 'ಭಯ' ಎಂಬುದು ಏನು? ಯಾವ ಕಾರಣಕ್ಕೆ? ಅದನ್ನು ಹೋಗಲಾಡಿಸಿಕೊಳ್ಳುವುದು ಹೇಗೆ? ನಿರ್ಭಯತೆಯನ್ನು ಬೆಳೆಸಿಕೊಳ್ಳಲು ಏನುಮಾಡಬೇಕು? ಇತ್ಯಾದಿ ಪ್ರಶ್ನೆಗಳು ಈ ನಿಟ್ಟಿನಲ್ಲಿ ಎದುರಾಗುತ್ತವೆ. ಜೀವನದಲ್ಲಿ ಯಾವುದಕ್ಕೂ ಬಗ್ಗದೆ, ಜಗ್ಗದೆ ಮುನ್ನುಗ್ಗುವ ವ್ಯಕ್ತಿಯನ್ನು ನಾವು ಧೀರ, ಶೂರ, ವೀರ ಮುಂತಾಗಿ ಕರೆಯುತ್ತೇವೆ. ಆದರೆ ಇದು ಎಲ್ಲರಿಗೂ ಏಕೆ ಸಾಧ್ಯವಾಗುವುದಿಲ್ಲ? ಕೆಲವರಿಗೆ ಮಾತ್ರ ಏಕೆ ಹೇಗೆ ಸಾಧ್ಯವಾಗುತ್ತದೆ. ಆ ನಿರ್ಭಯತೆಗೆ ಕಾರಣಗಳೇನು? ಎಂಬ ಕುತೂಹಲದ ಪ್ರಶ್ನೆಗಳು ಅದರೊಂದಿಗೆ ಹುಟ್ಟಿಕೊಳ್ಳುವುದು ಸಹಜ. ಇಂದಿನ ಸಮಾಜದಲ್ಲಿ ಇದು ಹೆಚ್ಚಾಗಿ ಬೆಂಬಿಡದೆ ಕಾಡುತ್ತಿರುವುದು ಹದಿಹರೆಯದ ಯುವಕ–ಯುವತಿಯರನ್ನು, ವಿದ್ಯಾರ್ಥಿಗಳನ್ನು, ಹತ್ತುಹಲವು ಕಾರಣಗಳಿಗಾಗಿ ಇವರು ಭಯಭೀತರಾಗುತ್ತಾರೆ. ಆ ಕಾರಣದಿಂದಲೇ ಹಿಂಜರಿಕೆಯುಂಟಾಗಿ, ಏನನ್ನೂ ಸಾಧಿಸಲಾಗದವರಾಗಿ ಹೇಡಿಗಳಂತೆ ವರ್ತಿಸುವುದುಂಟು.

**‘ಈ ಜಗತ್ತಿನಲ್ಲಿ ಪಾಪವೆಂಬುದೇನಾದರೂ ಇದ್ದರೆ ಅದು-ಭಯ’** – ಇದು ಸ್ವಾಮಿ ವಿವೇಕಾನಂದರ ವಾಣಿ. ಭಯವನ್ನು ಅವರು ಪಾಪಕ್ಕೆ ಹೋಲಿಸುತ್ತಾರೆ. ಪಾಪಪ್ರಜ್ಞೆಯಿಂದ ಕೂಡಿದವನು ಏನನ್ನೂ ಮಾಡಲಾರ, ಮುಂದುವರೆಯಲಾರ ಎಂಬುದು ಸತ್ಯ. ಹಾಗಾಗಿ ಅವನೊಬ್ಬ ನಿಷ್ಪ್ರಯೋಜಕನಂತೆ ಉಳಿದುಬಿಡುತ್ತಾನೆ. ಇಂತಹ ಪಾಪಪ್ರಜ್ಞೆಯಿಂದ ಕೂಡಿದವರು ಅಶಕ್ತರಾಗಿ, ಹೇಡಿಗಳಾಗಿ ಹಿಂದೆ ಉಳಿಯುವುದಷ್ಟೇ ಅಲ್ಲ, ಅದನ್ನು ಮುಚ್ಚಿ ಹಾಕಲು ಸುಳ್ಳುಗಾರರಾಗಿ ವರ್ತಿಸುತ್ತಾರೆ. ಮತ್ತಷ್ಟು ಪಾಪದ ಕೂಪಕ್ಕೆ ಒಳಗಾಗುತ್ತಾರೆ. **‘ಧೀರರು ಮಾತ್ರವೇ ಪ್ರಾಮಾಣಿಕರಾಗಿರಲು ಸಾಧ್ಯ. ಸಿಂಹ ಮತ್ತು ನರಿಯನ್ನು ಹೋಲಿಸಿ ನೋಡಿ’** ಎನ್ನುತ್ತಾರೆ. ಧೈರ್ಯವಂತರು ಯಾವಾಗಲೂ ಸತ್ಯವನ್ನೇ ನುಡಿಯಬಲ್ಲರು. ಏಕೆಂದರೆ ಅದನ್ನು ಎದುರಿಸುವ ಶಕ್ತಿ ಅವರಲ್ಲಿರುತ್ತದೆ.

ಭಯ, ಒಂದು ರೀತಿ ಸ್ವಯಂಕೃತಪರಾಧದ ಕೂಸು. ಅದರ ಫಲ. ನಾವೇ ಸೃಷ್ಟಿಸಿಕೊಂಡ ಒಂದು ಪೆಡಂಭೂತ. ಒಮ್ಮೆ ಅದು ನಮ್ಮ ಹೆಗಲೇರಿದರೆ ಅದರಿಂದ ಪಾರಾಗಲು ಹೆಚ್ಚು ಶ್ರಮಪಡಬೇಕಾಗುತ್ತದೆ. ಈ ವಿಶ್ವದ ಸಂಕಟಗಳಿಗೆಲ್ಲಾ ಅಥವಾ ವ್ಯಕ್ತಿಯ ಹಿಂಜರಿಕೆಗೆಲ್ಲಾ ಮೂಲ ಕಾರಣ–ಅಜ್ಞಾನ ಮತ್ತು ಭ್ರಮೆ. ಈ ಅಜ್ಞಾನ ಮತ್ತು ಭ್ರಮೆಯಿಂದ ಹುಟ್ಟಿಕೊಳ್ಳುವ ಭಯ ಮತ್ತು ಭೀತಿ ವ್ಯಕ್ತಿಯ ಸಂಕಟಗಳಿಗೆ ವೇದಿಕೆ ನಿರ್ಮಿಸುತ್ತದೆ. ಅಜ್ಞಾನ ಹಲವು ಮೂಢ ನಂಬಿಕೆಗಳನ್ನು ಹುಟ್ಟುಹಾಕಿ ವ್ಯಕ್ತಿಯನ್ನು ಭಯದ ಕಟ್ಟಿಗೆ ಒಳಗುಮಾಡುತ್ತದೆ. ಸ್ವಾಮಿ ವಿವೇಕಾನಂದರ ದೃಷ್ಟಿಯಲ್ಲಿ **‘ಭಯವೇ ದೊಡ್ಡ ಮೂಢನಂಬಿಕೆ’**. ಅಂತಹ ಮೂಢನಂಬಿಕೆಯನ್ನು ಹೋಗಲಾಡಿಸಿಕೊಂಡರೆ, ನಿರ್ಭೀತರಾಗಿ, ಧೈರ್ಯಶಾಲಿಗಳಾಗಿ, ಸಾಹಸಿಗಳಾಗಿ ಹೆಜ್ಜೆಹಾಕಿ ಸ್ವರ್ಗವನ್ನೇ ಸೃಷ್ಟಿಸಿಕೊಳ್ಳಲು ಸಾಧ್ಯ.

ಸ್ವಾಮಿ ವಿವೇಕಾನಂದರು ಧೈರ್ಯವನ್ನು ಎರಡು ವರ್ಗಗಳಾಗಿ ವಿಂಗಡಿಸುತ್ತಾರೆ. ‘ಒಂದು, ಸಿಡಿಗುಂಡುಗಳನ್ನು ಹೊರಚೆಲ್ಲುವ ತೋಪಿಗೆ ಎದೆಯೊಡ್ಡುವಂತಹ ಧೈರ್ಯ, ಮತ್ತೊಂದು ಆಧ್ಯಾತ್ಮಿಕ ಶ್ರದ್ಧೆಯಿಂದುದಿಸಿದ ಧೈರ್ಯ.’ ಕೆಲವರು ಮೊಂಡು ಧೈರ್ಯವನ್ನು ತೋರಬಲ್ಲರು. ಆದರೆ ಅದು ಅಪಾಯಕಾರಿಯೂ ಆಗಬಹುದು. ಧೈರ್ಯ ವಿವೇಕಯುಕ್ತವಾಗಿದ್ದರೇ ಹೆಚ್ಚು ಪ್ರಯೋಜನಕಾರಿ. ಆಧ್ಯಾತ್ಮಿಕ ಶ್ರದ್ಧೆಯಿಂದುದಯಿಸಿದ ಧೈರ್ಯ ಆ ಬಗೆಯದು. ಸಾತ್ವಿಕತೆಯ ಜೊತೆಗೆ ನೈತಿಕವಾದ ಬೆಂಬಲವೂ ಅದಕ್ಕಿರುತ್ತದೆ. **‘ನಿಮ್ಮ ಅಸ್ತಿತ್ವದ ಅತಿದೊಡ್ಡ ರಹಸ್ಯವೆಂದರೆ ನಿರ್ಭೀತರಾಗಿರುವುದು’** ಎಂಬ ಸ್ವಾಮೀಜಿಯವರ ಮಾತು ಒಂದು ದೊಡ್ಡ ರಕ್ಷಾಕವಚ.

ಭಯಕ್ಕೆ ಕಾರಣ ನಮ್ಮಲ್ಲಿರುವ – ಸಂಕುಚಿತ ಭಾವನೆ, ಅಸ್ಪಷ್ಟ ಆಲೋಚನೆ, ನಕಾರಾತ್ಮಕ ಚಿಂತನೆ, ಅನಿಶ್ಚಿತ ಭಾವನೆಗಳು, ಅಂಜುಕುಳಿತನ, ಇಚ್ಛಾಶಕ್ತಿಯ ಕೊರತೆ ಇತ್ಯಾದಿ. ಇವೆಲ್ಲವೂ ದೌರ್ಬಲ್ಯದ ಮನಸ್ಸಿನಿಂದ ಹುಟ್ಟಿಕೊಳ್ಳುವ ಕಾರಣಗಳೆಂದು ಸ್ವಾಮೀಜಿ ಹೇಳುತ್ತಾರೆ. ಎಷ್ಟೋ ವೇಳೆ ವ್ಯಕ್ತಿ ಅಸಂಬದ್ಧವಾದ ಕಾರಣಗಳಿಂದ ಭಯಕ್ಕೆ ತುತ್ತಾಗುವುದುಂಟು. ಇಲ್ಲದ ಆತಂಕಗಳು ಇಂತಹ ಭಯವನ್ನು ಸೃಷ್ಟಿಸುತ್ತವೆ. ವಿನಾಕಾರಣ ಭಯದಿಂದ ವ್ಯಕ್ತಿ ಎಷ್ಟೋ ಸಾರಿ ಮರುಹುಟ್ಟು ಪಡೆಯುತ್ತಾನೆ. ಸತ್ತು ಬದುಕುತ್ತಾನೆ. ಇವೆಲ್ಲವೂ ಆತ್ಮಸ್ಥೈರ್ಯದ ಕೊರತೆಯಿಂದ, ಹೇಡಿತನದಿಂದ ಉಂಟಾಗುವಂತಹುದು. ಒಬ್ಬ ವಿದ್ಯಾರ್ಥಿ ಎಷ್ಟೇ ಚೆನ್ನಾಗಿ ಓದಿಕೊಂಡಿದ್ದರೂ ಅಥವಾ ಒಬ್ಬ ಕ್ರೀಡಾಪಟು ಎಷ್ಟೇ ಚೆನ್ನಾಗಿ ಅಭ್ಯಾಸ ನಡೆಸಿದ್ದರೂ ಅದನ್ನು ಪ್ರದರ್ಶಿಸುವಾಗ ಹಿಂಜರಿಯುವುದುಂಟು. ಏನಾಗುತ್ತದೋ ಎಂಬ ಭಯ ಅವನನ್ನು ಆವರಿಸುವುದುಂಟು. ಅಂತಹ ಸಂದರ್ಭಗಳಲ್ಲಿ ಅವನ ಮನೋಬಲ ಕುಗ್ಗಿದಂತಾಗುತ್ತದೆ. ಅಧೈರ್ಯದಿಂದ ಸೋಲೂ ಸಂಭವಿಸಬಹುದು. ವಿವೇಕಾನಂದರ ದೃಷ್ಟಿಯಲ್ಲಿ ನಮ್ಮೆಲ್ಲ ಸೋಲಿಗೆ ಕಾರಣವಾಗಿರುವುದು, ಹಿಂದುಳಿಕೆಗೆ ಮೂಲವಾಗಿರುವುದು ಆಧಾರರಹಿತವಾದ ಇಂತಹ ಭಯ, ಆತಂಕ; ಇವೇ ಅತಿದೊಡ್ಡ ದೌರ್ಬಲ್ಯಗಳು.

**‘ಜೀವನದಲ್ಲಿ ಅತಿ ಶ್ರೇಷ್ಠವಾದ ಮಾರ್ಗದರ್ಶಕ ಎಂದರೆ – ಶಕ್ತಿ’** ಎನ್ನುತ್ತಾರೆ ಸ್ವಾಮೀಜಿ. ಶಕ್ತಿಯೇ ನಮ್ಮೆಲ್ಲ ಯಶಸ್ಸಿನ ಕೀಲಿಕೈ. ಅದು ಜೀವಂತಿಕೆಯ ಲಕ್ಷಣ ಕೂಡ. ಆದರೆ ಆ ಶಕ್ತಿಯನ್ನು ಬೆಳೆಸಿಕೊಳ್ಳಲು ನಮ್ಮಲ್ಲಿ ನಿರ್ಭೀತಿಯ ಶಂಕುಸ್ಥಾಪನೆ ಮೊದಲು ಆಗಬೇಕು. ಅದಿಲ್ಲದೆ ಶೌರ್ಯಪ್ರದರ್ಶನ ಸಾಧ್ಯವಾಗದು. ವ್ಯಕ್ತಿ ತಾನು ಬೆಳೆದುಬಂದ ಪರಿಸರದಿಂದ ಇಂತಹ ಅಂಶಗಳನ್ನು ತನ್ನಲ್ಲಿ ಮೈಗೂಡಿಸಿಕೊಳ್ಳುತ್ತಾನೆ. ಆದ್ದರಿಂದ ಪರಿಸರ ಕೂಡ ಬಹಳ ಮುಖ್ಯವಾಗುತ್ತದೆಯಾದರೂ, ಸ್ವತಂತ್ರವಾದ ಚಿಂತನೆ ಅದನ್ನು ಲಘುವಾಗಿಸಬಲ್ಲದು. ತನ್ನತನವನ್ನು ರೂಪಿಸಲು ಕಾರಣವಾಗಬಲ್ಲದು. ಯುವಕರು ಎಷ್ಟೋಬಾರಿ ಇತರರೊಂದಿಗೆ ತನ್ನನ್ನು ಹೋಲಿಸಿಕೊಳ್ಳುವುದುಂಟು. ಆದರೆ, ಆ ಹೋಲಿಕೆ ಉತ್ತಮವಾದುದಾದರೆ ಚಿಂತೆಯಿಲ್ಲ. ಅದು ಭಿನ್ನ ರೀತಿಯದ್ದಾಗಿದ್ದಾಗ ದುಷ್ಪರಿಣಾಮ ತಪ್ಪಿದ್ದಲ್ಲ. ಅನೇಕ ಸಂದರ್ಭಗಳಲ್ಲಿ ಅದು ನಮ್ಮನ್ನು ಅಧೀರರನ್ನಾಗಿಸಬಹುದು, ಭಯಕ್ಕೆ ಕಾರಣವಾಗಲೂ ಬಹುದು. ದೌರ್ಬಲ್ಯಗಳ ಬಗ್ಗೆ ಮತ್ತೆ ಮತ್ತೆ ಆಲೋಚಿಸಿ, ಅವನ್ನು ತೊಡೆದು ಹಾಕಲು ಪ್ರಯತ್ನಿಸಿದಾಗ ನಾವು ಎಷ್ಟೋ ಗೆಲುವನ್ನು ಸಾಧಿಸಿದಂತಾಗುತ್ತದೆ ಎಂಬುದನ್ನು ನೆನಪಿಸಬೇಕು. ಅನಿರೀಕ್ಷಿತವಾದ ಭಯ ಎದುರಾದಾಗ ಅದಕ್ಕೆ ಹೆಚ್ಚು ಗಮನ ಕೊಡದೆ ಅದನ್ನು ನಿರ್ಲಕ್ಷಿಸಿದಾಗ ಅದರಿಂದ ಸ್ವಲ್ಪ ಮಟ್ಟಿಗೆ ಪಾರಾದಂತಾಗುತ್ತದೆ. ಇಚ್ಛಾಶಕ್ತಿಯ ಪ್ರದರ್ಶನ ಇದಕ್ಕೆ ಪೂರಕವಾಗುತ್ತದೆ.

‘ಪ್ರಪಂಚದಲ್ಲಿರುವ ಎಲ್ಲ ನಕಾರಾತ್ಮಕ ಭಾವನೆಗಳು ಮತ್ತು ಚಿಂತನೆಗಳು ಉದ್ಭವಿಸಿರುವುದು ಭಯವೆಂಬ ಅನಿಷ್ಟದಿಂದಲೇ’ ಎಂಬುದು ಸ್ವಾಮೀಜಿಯ ಅಭಿಪ್ರಾಯ. ಭಯ ಒಂದು ರೀತಿ ಎಲ್ಲವನ್ನೂ ನುಂಗಿಹಾಕಿಬಿಡುತ್ತದೆ. ನಮ್ಮ ಮುನ್ನಡೆಗೆ ತಡೆಯೊಡ್ಡುವ ದೈತ್ಯಶಕ್ತಿಯಾಗಿಬಿಡುತ್ತದೆ. ನಮ್ಮಲ್ಲಿರುವ ನಕಾರಾತ್ಮಕ

ಭಾವನೆಗಳನ್ನು ದೂರವಾಗಿಸಿ ಬದುಕುವುದನ್ನು ಕಲಿಯಬೇಕಾಗಿದೆ. ನೈತಿಕತೆ ಅದಕ್ಕೆ ಪೂರಕವಾಗುತ್ತದೆ. ಹೆಚ್ಚಾಗಿ ಹೆದರುವವರು, ಭಯಪಡುವವರು ಹೇಡಿಗಳಷ್ಟೇ ಅಲ್ಲ ಅಧರ್ಮಿಗಳು ಕೂಡ. ಏಕೆಂದರೆ ಅಂತಹವರಲ್ಲಿ ಆತ್ಮಶಕ್ತಿ ಕುಂದಿರುತ್ತದೆ. ಪಾಪಪ್ರಜ್ಞೆ ಕಾಡುತ್ತಿರುತ್ತದೆ. ಸತ್ಯವನ್ನು ಮೆಟ್ಟಿನಿಲ್ಲುವ ಎದೆಗಾರಿಕೆ ಇಲ್ಲವಾಗಿರುತ್ತದೆ. ವ್ಯಕ್ತಿಯ ಬದುಕಿನಲ್ಲಿ ಇದಕ್ಕಿಂತ ದೊಡ್ಡ ಸೋಲು ಮತ್ತೊಂದಿರುವುದಿಲ್ಲ. ಸ್ವಾಮೀಜಿ ಹೇಳುತ್ತಾರೆ: ''ನಿಮ್ಮನ್ನು ನೀವು ಎಷ್ಟು ಅಲ್ಪರಾಗಿಸಿಕೊಳ್ಳುತ್ತೀರೋ, ಸ್ವಾರ್ಥಿಗಳನ್ನಾಗಿಸಿಕೊಳ್ಳುತ್ತೀರೋ, ನಿಮ್ಮ ಭಯ ಅಷ್ಟು ಹೆಚ್ಚಾಗುತ್ತದೆ. ನಾನೊಬ್ಬ ಯಃಕಶ್ಚಿತ್ ಮನುಷ್ಯ ಎಂದು ಯಾರು ಭಾವಿಸುತ್ತಾರೋ ಅವರನ್ನು ಭಯ ಖಂಡಿತವಾಗಿ ಆವರಿಸಿಕೊಳ್ಳುತ್ತದೆ.'

ತನ್ನ ಬಗ್ಗೆ ತಾನೇ ನಂಬಿಕೆ ಕಳೆದುಕೊಂಡವನನ್ನು ಯಾರೊಬ್ಬರೂ ರಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ 'ನಂಬಿಕೆಯೇ ಜೀವನ' ಎಂಬ ಮಾತಿದೆ. ಅದೊಂದು ದೊಡ್ಡ ಶಕ್ತಿ. ಆದರೆ ಅದು ಮೂಢ ನಂಬಿಕೆಯಾಗಿರಬಾರದು ಅಷ್ಟೆ. ನೈತಿಕವಾದ ನಂಬಿಕೆ ವ್ಯಕ್ತಿಗೆ ಮೂಲಾಧಾರ. ನಮ್ಮ ಸನ್ನಡತೆಯೂ ಅದಕ್ಕೆ ಪೂರಕವಾಗಬಲ್ಲುದು. ''ಇತರರಿಗೆ ಮಾಡಿದ ಅತ್ಯಲ್ಪ ಸೇವೆಯೂ ನಿಮ್ಮೊಳಗಿನ ಶಕ್ತಿಯನ್ನು ಜಾಗೃತಗೊಳಿಸುತ್ತದೆ; ಇತರರ ಒಳಿತಿಗಾಗಿ ಮಾಡಿದ ಅತಿಸಣ್ಣ ಆಲೋಚನೆಯೂ ನಿಮ್ಮೆದೆಯಲ್ಲಿ ಸಿಂಹದ ಬಲವನ್ನು ತುಂಬುತ್ತದೆ'' ಎಂಬ ವಿವೇಕಾನಂದರ ಮಾತು ಆಧ್ಯಾತ್ಮಿಕ ನೆಲೆಯಿಂದ ಪ್ರೇರಿತವಾದದ್ದು.

ಭಯ ಕಾಡುವುದು ಅಲ್ಪರಿಗೆ, ಅಸತ್ಯದಿಂದ ನಡೆದುಕೊಳ್ಳುವವರಿಗೇ ಹೊರತು ಧೈರ್ಯಶಾಲಿಗಳಿಗಲ್ಲ. ಏಕೆಂದರೆ ಅದನ್ನು ಮೆಟ್ಟಿ ನಿಲ್ಲುವ ಶಕ್ತಿ ಅವರಲ್ಲಿರುತ್ತದೆ. ಮಹತ್ಕಾರ್ಯಗಳನ್ನು ಮಾಡುವವರು ಧೈರ್ಯಶಾಲಿಗಳು ಮಾತ್ರ. ಹೇಡಿಗಳಿಂದ ಅದು ಸಾಧ್ಯವಾಗದು. ''ನಾನು ಹೇಡಿತನವನ್ನು ದ್ವೇಷಿಸುತ್ತೇನೆ; ನನಗೆ ಹೇಡಿಗಳೊಂದಿಗೆ ಯಾವ ಸಂಬಂಧವೂ ಇಲ್ಲ'' – ಎನ್ನುತ್ತಾರೆ ಸ್ವಾಮೀಜಿ. ಭಯವೇ ಮೃತ್ಯು; ಅದನ್ನು ಹೋಗಲಾಡಿಸಿಕೊಳ್ಳದ ಹೊರತು ಮುಕ್ತಿ ಸಾಧ್ಯವಿಲ್ಲ ಎನ್ನುವುದು ಅವರ ಸ್ಪಷ್ಟನುಡಿ.

'ನಿರ್ಭೀತಿ'ಯನ್ನು ಸ್ವಾಮೀಜಿ, ಅದೊಂದು ಧರ್ಮ ಎಂದೇ ಕರೆಯುತ್ತಾರೆ: ಜಗತ್ತಿಗೆ ಬೋಧಿಸಬೇಕಾದ ಏಕೈಕ ಧರ್ಮ ಎಂದರೆ ನಿರ್ಭೀತಿಯ ಧರ್ಮ. ಭೋಗಭರಿತ ಪ್ರಪಂಚಗಳಾಗಲೀ, ಧಾರ್ಮಿಕ ಜಗತ್ತಿನಲ್ಲಾಗಲೀ ಭಯವೇ ಅವನತಿ ಮತ್ತು ಪಾಪಗಳಿಗೆ ಮುಖ್ಯ ಕಾರಣ. ಭಯವೇ ದುಃಖದ ಮೂಲ, ಭಯದಿಂದಲೇ ಮೃತ್ಯು ಮತ್ತು ಭಯವೇ ಕೆಡುಕಿನ ಉಗಮಸ್ಥಾನ. ಈ ಭಯಕ್ಕೆ ಕಾರಣವೇನು? ನಮ್ಮ ನಿಜಸ್ವರೂಪದ ಬಗೆಗಿನ ಅಜ್ಞಾನ. ನಿಜ ಸ್ವರೂಪವನ್ನು ಅರಿತಾಗ ವ್ಯಕ್ತಿ ಭಯದಿಂದ ದೂರವಾಗುತ್ತಾನೆ. ನಿರ್ಭಯತೆಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಸಾಹಸವನ್ನು ಮೆರೆಯಲು ಅದೊಂದು ಶಕ್ತಿಯಾಗಿ ಪರಿಣಮಿಸುತ್ತದೆ.

'ಶಕ್ತಿ ಮತ್ತು ಪವಿತ್ರತೆಗೆ ಪೂರಕವಾಗಿರುವುದೆಂದರೆ – ನಿರ್ಭೀತಿ' ಎನ್ನುತ್ತಾರೆ ಸ್ವಾಮೀಜಿ. ನಿರ್ಭೀತಿಯನ್ನು ಬೆಳೆಸಿಕೊಂಡರೆ ನಾವು ಏನನ್ನಾದರೂ ಸಾಧಿಸಲು ಸಾಧ್ಯ. ಜೀವನವೆಂದರೇ ಸವಾಲುಗಳ ವಿರುದ್ಧದ ಹೋರಾಟ ಎಂದು ಹೇಳುತ್ತ 'ನಿರ್ಭೀತಿ' ಗೆ ಅವರು ಕೊಡುವ ಸರಳ ವ್ಯಾಖ್ಯಾನ : ನಮ್ಮ ಬಾಳಿನಲ್ಲಿ ಅನೇಕ ಎಡರುತೊಡರುಗಳನ್ನು ನಾವು ಅನುಭವಿಸಬೇಕಾಗುತ್ತದೆ; ಕಷ್ಟನಷ್ಟಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಅವುಗಳನ್ನು ಧೈರ್ಯದಿಂದ ಎದುರಿಸುವುದೇ – 'ನಿರ್ಭೀತಿ' ಎನಿಸಿಕೊಳ್ಳುತ್ತದೆ. ಏಕೆಂದರೆ ಮನುಷ್ಯ ಭಯದ ಕಾರಣದಿಂದಲೇ ಎಷ್ಟೋ ತಪ್ಪುಗಳನ್ನು ಮತ್ತೆ ಮತ್ತೆ ಮಾಡುವಂತಾಗುತ್ತದೆ. ಆಗ ಅವನು ಧೈರ್ಯ, ಸ್ಥೈರ್ಯ, ತಾಳ್ಮೆ ಎಲ್ಲವನ್ನೂ ಕಳೆದುಕೊಂಡಿರುತ್ತಾನೆ. ಧೈರ್ಯವಂತರಾಗಿದ್ದಾಗ ನಿರ್ಭೀತಿಯಿಂದ ಎಲ್ಲವನ್ನೂ ಸಹನೆಯಿಂದ ಪರಿಹರಿಸಿಕೊಳ್ಳಲು ಮುಂದಾಗುತ್ತಾನೆ. 'ಧೈರ್ಯಂ ಸರ್ವತ್ರ ಸಾಧನಂ' ಎಂಬ ಮಾತು ಹುಸಿಯಲ್ಲ.

ಸ್ವಾಮಿ ವಿವೇಕಾನಂದರು ಹೇಳುವಂತೆ **'ಭಯವೇ ಮೃತ್ಯು'** ನಿಜ. ಭಯದಲ್ಲಿಯೇ ಜೀವಿಸುವ ಮನುಷ್ಯ ಬದುಕಿದ್ದೂ ಸತ್ತಂತೆ. ಅದರಿಂದ ಅವನಿಗೂ ಪ್ರಯೋಜನವಾಗುವುದಿಲ್ಲ , ಅವನನ್ನು ಅವಲಂಬಿಸಿ ಬದುಕುತ್ತಿರುವವರಿಗೂ ಪ್ರಯೋಜನವಾಗುವುದಿಲ್ಲ. ಅದಕ್ಕೆ ಸ್ವಾಮೀಜಿ ಕೊಡುವ ಕರೆ ಹೀಗಿದೆ : ''ಎದ್ದು ನಿಲ್ಲಿ, ಬಂಧು ಭಗಿನಿಯರೆ... ಸತ್ಯದಲ್ಲಿ ಶ್ರದ್ಧೆಯಿಡಲು ಧೈರ್ಯತಾಳಿ, ಸತ್ಯವನ್ನು ಅನುಷ್ಠಾನಕ್ಕೆ ತರುವ ಧೈರ್ಯತಾಳಿ! ಜಗತ್ತಿಗೆ ಧೀರರಾದ ಕೆಲವು ನೂರು ಪುರುಷರ ಮತ್ತು ಸ್ತ್ರೀಯರ ಅಗತ್ಯವಿದೆ. ಸತ್ಯವನ್ನು ಅರಿಯುವ ಧೈರ್ಯ, ಸತ್ಯವನ್ನು ಜೀವನದಲ್ಲಿ ಪ್ರಕಾಶಿಸುವ ಧೈರ್ಯ, ಮೃತ್ಯುಮುಖದಲ್ಲಿ ಅಳುಕದ, ಅಲ್ಲ-ಮೃತ್ಯುವನ್ನೇ ಸ್ವಾಗತಿಸುವ ಧೈರ್ಯ, ಮನುಷ್ಯನಿಗೆ ತಾನು ಆತ್ಮಸ್ವರೂಪನೆಂದೂ, ಇಡೀ ವಿಶ್ವದಲ್ಲಿ ಅವನನ್ನು ಕೊಲ್ಲಬಲ್ಲದ್ದು ಯಾವುದೂ ಇಲ್ಲವೆಂದೂ ಅರುಹಬಲ್ಲ ಧೈರ್ಯ – ಇಂಥ ಧೈರ್ಯವನ್ನು ಅಭ್ಯಾಸಮಾಡಿ.'' ಈ ವಿವೇಕವಾಣಿ ನಮಗಿಂದು ಬೆಳಕಾಗಬೇಕಾಗಿದೆ. 'ನಿರ್ಭೀತಿ' ಬದುಕನ್ನು ಎದುರಿಸಿ ಗೆಲ್ಲುವ ಅಸ್ತ್ರವಾಗಬೇಕಾಗಿದೆ.

ಪರಬ್ರಹ್ಮನ ಅರಿವನ್ನು ಪಡೆದ ಶ್ರೇಷ್ಠ ಗುರುಗಳಿಗೆ ಎಂದಾದರೂ ಮರಣವಿದೆಯೆ? ಅವರು ಈ ದೇಹವೆಂಬ ಪೊರೆಯನ್ನು ಮಾತ್ರ ಕಳಚಿ ಬಿಸಾಡುವರು. ಅವರು ಯಾವಾಗಲೂ ಜೀವಿಸಿರುವರು, ಸೂಕ್ಷ್ಮ ಶರೀರದಲ್ಲಿ ಸದಾ ಲಭ್ಯರಾಗಿರುವರು. ಅವರು ತಮ್ಮ ಬಳಿಗೆ ಬಂದವರನ್ನು ಮುನ್ನಡೆಸುವರು. ಅವರ ದರ್ಶನವನ್ನು ಪಡೆಯುವುದು ಕೂಡ ಸಾಧ್ಯ.

— ಸ್ವಾಮಿ ಶಿವಾನಂದ



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)



ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೧೯

ವಿರಜಾನಂದರು ಮಾಯಾವತಿಯ ಜವಾಬ್ದಾರಿಯನ್ನು ವಹಿಸಿಕೊಂಡ ನಂತರ ಅವರಿಗೆ ಮೊದಲು ಎದುರಾದದ್ದು ಆರ್ಥಿಕ ಬಿಕ್ಕಟ್ಟು. ಏಕೆಂದರೆ ಮಿಸೆಸ್ ಸೇವಿಯರ್‌ಗೆ ಮೊದಲಿನಂತೆ ಆಶ್ರಮಕ್ಕೆ ಆರ್ಥಿಕವಾಗಿ ನೆರವಾಗಲಾಗುತ್ತಿರಲಿಲ್ಲ ; 'ಪ್ರಬುದ್ಧ ಭಾರತ'ದ ಎಲ್ಲ ಚಂದಾದಾರರ ಅವಧಿ ಡಿಸೆಂಬರ್‌ನಲ್ಲಿ ಮುಗಿಯುತ್ತಿದ್ದಂತೆಯೇ ಅವರು ತಮ್ಮ ದೇಶಕ್ಕೆ ಹಿಂತಿರುಗುವುದೆಂದು ನಿರ್ಧರಿಸಿದ್ದರು. ವಿರಜಾನಂದರಿಗೆ ಬಾಲ್ಯದಿಂದಲೇ ಮಿತವ್ಯಯದ ಅಭ್ಯಾಸವು ಇತ್ತು; ಅದು ಈಗ ಚೆನ್ನಾಗಿಯೇ ಉಪಯೋಗಕ್ಕೆ ಬಂತು. ಸ್ವಲ್ಪ ಹಣವನ್ನೇ ಜಾಗರೂಕತೆಯಿಂದ ಬಳಸಿ, ನಿಧಾನವಾಗಿ ಆಶ್ರಮವನ್ನು ಆರ್ಥಿಕ ಮುಗ್ಗಟ್ಟಿನಿಂದ ಪಾರುಮಾಡಿದರು. ಇವರ ಪ್ರಾಮಾಣಿಕ ಪರಿಶ್ರಮ, ಕೆಲಸದಲ್ಲಿನ ಅಚ್ಚುಕಟ್ಟುತನ ಮತ್ತು ಮಿತವ್ಯಯದ ಅಭ್ಯಾಸವು ಮದರ್‌ಗೆ ಅತ್ಯಂತ ಸಂತೋಷವನ್ನುಂಟುಮಾಡಿತು. ವಿರಜಾನಂದರ ಬಗ್ಗೆ ಅವರ ವಿಶ್ವಾಸ, ಪ್ರೀತ್ಯಾದರಗಳು ಬೆಳೆಯುತ್ತಹೋದವು. ಈ ಜವಾಬ್ದಾರಿಗಳನ್ನೆಲ್ಲ ಹೊರುವ ಮೊದಲು ವಿರಜಾನಂದರು ಶ್ರೀಮಾತೆಯವರಿಗೊಂದು ಪತ್ರ ಬರೆದು, ಎಲ್ಲ ವಿಷಯಗಳನ್ನೂ ತಿಳಿಸಿ, ಅವರ ಆಶೀರ್ವಾದ ಬೇಡಿದ್ದರು. ಸಕಾಲದಲ್ಲಿ ಜಯರಾಂಬಾಟಿಯಿಂದ ಶ್ರೀಮಾತೆಯವರ ಆಶೀರ್ವಾದ ಹೊತ್ತ ಮರು ಓಲೆಯೊಂದು ಬಂದಿತ್ತು. ಅದರಲ್ಲಿ ಶ್ರೀಮಾತೆಯವರು ಹೀಗೆ ಬರೆದಿದ್ದರು —

೧೯೦೬

"ನೀನು ಮಾಯಾವತಿಯ ಅದ್ವೈತಾಶ್ರಮದಲ್ಲಿ ಮಿಸೆಸ್ ಸೇವಿಯರೊಂದಿಗಿರುವೆ ಎಂದು ತಿಳಿದು ಸಂತೋಷವಾಯಿತು. ಮಿಸೆಸ್ ಸೇವಿಯರ್ ಮಾತೆಗೆ ನನ್ನ ವಿಜಯದಶಮಿಯ ಆಶೀರ್ವಾದಗಳನ್ನು ತಿಳಿಸು. ಸ್ವರೂಪಾನಂದನು ಇನ್ನಿಲ್ಲವೆಂಬುದನ್ನು ಕೇಳಿ ತುಂಬ ದುಃಖವಾಯಿತು. ಇಂಗ್ಲಿಷ್ ಪತ್ರಿಕೆಯ ಕೆಲಸವನ್ನು ಮುಂದುವರಿಸುತ್ತಿರುವ ಸುದ್ದಿ ಕೇಳಿ ಆನಂದವಾಯಿತು... "

— ನಿಮ್ಮೆಲ್ಲರ ಮಾತಾ ಠಾಕೂರಾಣಿ

'ಪ್ರಬುದ್ಧ ಭಾರತ'ವು ನಿಯತಕಾಲಿಕವಾಗಿ ಪ್ರಕಟವಾಗತೊಡಗಿತು. ಸೋದರಿ ನಿವೇದಿತಾ ನಿಯಮಿತವಾಗಿ ಲೇಖನಗಳನ್ನು ಕಳುಹಿಸುತ್ತಿದ್ದರು. ವಿರಜಾನಂದರು ಸಹ ಬರೆಯುತ್ತಿದ್ದರು. ಮೊದಮೊದಲು ಕಠಿಣವೆನಿಸಿದ್ದ ಅದ್ವೈತ ಆಶ್ರಮದ ಜವಾಬ್ದಾರಿಯು ನಿಧಾನವಾಗಿ ಸಹಜವಾಗತೊಡಗಿತು. ಸ್ವಾಮಿ ಸ್ವರೂಪಾನಂದರು ಸ್ವಾಮೀಜಿಯವರ 'ಕೃತಿಶ್ರೇಣಿ'ಯನ್ನು ಪ್ರಕಟಪಡಿಸಲು ಎಲ್ಲ ವ್ಯವಸ್ಥೆಯನ್ನೂ ಮಾಡಿದ್ದರು. ಅದಕ್ಕಾಗಿ ಬೇಕಾದ ಬಹಳಷ್ಟು ವಿಷಯಗಳನ್ನು ಸಂಗ್ರಹಿಸಿದ್ದರು, ಮತ್ತು ಮುದ್ರಣದ ಕೆಲಸವು ಸ್ವಲ್ಪ ಸಾಗಿತ್ತು. ಈ ಮಹತ್ವಪೂರ್ಣ ಕೆಲಸವನ್ನು ಪೂರ್ಣಗೊಳಿಸಲು ವಿರಜಾನಂದರು ಮತ್ತು ಮಿಸೆಸ್ ಸೇವಿಯರ್ ಇಬ್ಬರೂ ಕಾರ್ಯತತ್ಪರರಾದರು. ಮಿಸೆಸ್ ಸೇವಿಯರ್ ಡಿಸೆಂಬರ್‌ನಲ್ಲಿ ಸ್ವದೇಶಕ್ಕೆ ಮರಳುವ ನಿರ್ಧಾರವು ಬದಲಾಗಿ, ಸದ್ಯಕ್ಕೆ ಸ್ಥಗಿತಗೊಂಡಿತು. ಸ್ವಾಮೀಜಿಯವರ 'ಶಿಕಾಗೋ ಉಪನ್ಯಾಸ', 'ರಾಜಯೋಗ' ಮತ್ತು ಕೆಲವು ಭಾಷಣಗಳನ್ನೊಳಗೊಂಡ ಮೊದಲ ಸಂಪುಟದ ಬಹುಭಾಗವನ್ನು ಸ್ವರೂಪಾನಂದರೇ ಮುದ್ರಣಕ್ಕಾಗಿ ಸಿದ್ಧಗೊಳಿಸಿದ್ದರು. ವಿರಜಾನಂದರು ಈಗ ಅದಕ್ಕೆ ಬೇಕಾಗುವ ಮತ್ತಷ್ಟು ವಿಷಯಗಳನ್ನು ಸಂಗ್ರಹಿಸತೊಡಗಿದರು. ಯಾವ ಯಾವ ನಿಯತಕಾಲಿಕೆಗಳಲ್ಲಿ ಸ್ವಾಮೀಜಿಯವರ ಉಪನ್ಯಾಸಗಳು ಪ್ರಪ್ರಥಮವಾಗಿ ಪ್ರಕಟಗೊಂಡಿದ್ದವೋ, ಆ ಹಳೆಯ ಪ್ರತಿಗಳೆಲ್ಲ ಈಗ ಸಂಗ್ರಹವಾಗತೊಡಗಿದವು. ಸ್ವಾಮೀಜಿಯವರ ಉಪನ್ಯಾಸಮಾಲೆ ಮತ್ತು ಸಂಭಾಷಣೆಗಳ ಸಂಗ್ರಹಕ್ಕಾಗಿ ವಿರಜಾನಂದರು ಅಮೆರಿಕಾದ ಭಕ್ತರಿಗೂ, ಸ್ನೇಹಿತರಿಗೂ ಪತ್ರ ಬರೆದರು. ಭಾರತದ ನಾನಾ ಪ್ರದೇಶದ ನಾನಾ ಪ್ರಕಾರದ ಜನರಿಂದಲೂ, ಅಮೆರಿಕಾ-ಇಂಗ್ಲೆಂಡ್‌ಗಳ ವಿಭಿನ್ನ ವ್ಯಕ್ತಿಗಳಿಂದಲೂ ಸ್ವಾಮೀಜಿಯವರ ಭಾಷಣ ಮತ್ತು ಕೃತಿಗಳನ್ನು ಸಂಗ್ರಹಿಸುವುದು ಅಂತಹ ಸುಲಭವಾದ ಕೆಲಸವೇನೂ ಆಗಿರಲಿಲ್ಲ. ಸ್ವಾಮೀಜಿಯವರ ಆಶೀರ್ವಾದದಿಂದ ವಿರಜಾನಂದರು ಈ ದುಷ್ಕರ ಕಾರ್ಯವನ್ನು ಎಷ್ಟು ದಕ್ಷತೆಯಿಂದ ಮಾಡಿದರೆಂಬುದನ್ನು ಭಾವಿಸಿದರೆ ಆಶ್ಚರ್ಯವಾಗುವುದು. ಸಂಗ್ರಹಿಸಿದ ಸಾಹಿತ್ಯವನ್ನು ಪರಿಶೀಲಿಸಿ, ಸಂಸ್ಕರಿಸಿ, ಗ್ರಂಥರೂಪದಲ್ಲಿ ಹೊರತರುವುದು ಅತ್ಯಂತ ಕಠಿಣ ಕಾರ್ಯವೇ ಆಗಿತ್ತು. ಏಕೆಂದರೆ ಸ್ವಾಮೀಜಿಯವರು ತರಗತಿ ಅಥವಾ ಉಪನ್ಯಾಸದಲ್ಲಿ ನುಡಿದಂತಹ ಮಾತುಗಳನ್ನು ಯಾರುಯಾರು ಬರೆದುಕೊಂಡಿದ್ದರೋ ಅವರು ಹಲವೊಂದು ಕಡೆ ಮುಖ್ಯವಾದ ಭಾಗಗಳನ್ನೇ ಬಿಟ್ಟುಬಿಟ್ಟಿರುತ್ತಿದ್ದರು, ಇಲ್ಲವೇ (ಆ ಜಾಗಗಳನ್ನು ತಮ್ಮದೇ ಆದ ವಾಕ್ಯಗಳಿಂದ ತುಂಬಲು) ಅಧ್ಯಾಹಾರ್ಯ[೧] ಮಾಡಲು ಹೋಗಿ ಸಾಮಂಜಸ್ಯವನ್ನು ನಷ್ಟಗೊಳಿಸಿದ್ದರು. ಆದ್ದರಿಂದ ಭಾಷಣಗಳೆಲ್ಲವನ್ನೂ ಆಮೂಲಾಗ್ರವಾಗಿ ಪರಿಷ್ಕರಿಸುವ ಅಗತ್ಯವಿತ್ತು.

---

[೧] ಅಧ್ಯಾಹಾರ್ಯ — ಅರ್ಥಪೂರ್ತಿ ಮಾಡುವುದಕ್ಕಾಗಿ ಬಿಟ್ಟು ಹೋಗಿರುವ ಪದ ಮೊದಲಾದವುಗಳನ್ನು ಊಹಿಸಿ ಸೇರಿಸಿಕೊಳ್ಳುವುದು.

ಮೊದಮೊದಲು ವಿರಜಾನಂದರು ಬೆಳಗ್ಗೆ ಚಹಾ ಕುಡಿದು ಈ ಕೆಲಸ ಪ್ರಾರಂಭಿಸುತ್ತಿದ್ದವರು ಹನ್ನೆರಡು ಗಂಟೆಯವರೆಗೂ ಎಡೆ ಬಿಡದೆ ಮಾಡುತ್ತಿದ್ದರು. ಸಂಜೆ ಮದರ್ ಅವರೊಂದಿಗೆ ಕುಳಿತು ಬೆಳಗಿನ ಕೆಲಸವನ್ನು ಪರಿಶೀಲಿಸುತ್ತಿದ್ದರು. ಊಟದ ನಂತರ ಮತ್ತೆ ಕುಳಿತು ರಾತ್ರಿ ಹನ್ನೊಂದರವರೆಗೂ ಮುಂದುವರಿಸುತ್ತಿದ್ದರು.

ವಿರಜಾನಂದರಿಗೂ ಮಿಸೆಸ್ ಸೇವಿಯರ್‌ಗೂ ಸಂಸ್ಕರಣದ ವಿಷಯದಲ್ಲಿ ಅನೇಕವೇಳೆ ಭಿನ್ನಾಭಿಪ್ರಾಯಗಳು ಮೂಡುತ್ತಿದ್ದವು. ಇಂಥ ಸಂದರ್ಭದಲ್ಲಿ ವಿರಜಾನಂದರು ಸ್ವಾಮೀಜಿಯವರ ಭಾವಾರ್ಥವನ್ನು ಹಿಡಿದಿಡಲು ಪ್ರಯತ್ನಿಸುತ್ತಿದ್ದರು. ಇದರಿಂದ ಕೆಲವೆಡೆ ಭಾಷೆಯ ಸ್ಪಷ್ಟತೆಗೆ ಕುಂದುಂಟಾಗುತ್ತಿದ್ದುದರಿಂದ ಮಿಸೆಸ್ ಸೇವಿಯರ್ ಕೋಪಗೊಳ್ಳುತ್ತಿದ್ದರು. 'ಜನರ ನಿಂದೆಗೆ ಒಳಗಾಗುವಂತಹ ಈ ರೀತಿಯ ಇಂಗ್ಲಿಷನ್ನು ಸ್ವಾಮೀಜಿಯವರ ಬಾಯಿಂದ ಹೊರಡಿಸುವುದು ಉಚಿತವಲ್ಲ' ಎಂಬುದೇ ಅವರ ಆಗ್ರಹ. ಇವರಿಬ್ಬರ ಭಿನ್ನಾಭಿಪ್ರಾಯವು ಕೆಲವೊಮ್ಮೆ ಜಗಳಕ್ಕೂ ತಿರುಗುತ್ತಿತ್ತು. ಇದರ ಮೂಲದಲ್ಲಿತ್ತು ಇಬ್ಬರಿಗೂ ಸ್ವಾಮೀಜಿಯವರ ಬಗ್ಗೆ ಇದ್ದಂತಹ ಗಾಢವಾದ ಪ್ರೀತಿ. ಇಬ್ಬರೂ ಸ್ವಾಮೀಜಿಯವರನ್ನೇ ಸರಿಯಾಗಿ ಪ್ರತಿಬಿಂಬಿಸಲು ಇಚ್ಛಿಸಿದ್ದರಷ್ಟೆ!

ಸ್ವಾಮೀಜಿಯವರ ಕೃತಿಶ್ರೇಣಿಯ ಸಂಸ್ಕರಣ, ಪ್ರಕಾಶನವಲ್ಲದೆ ವಿರಜಾನಂದರಿಗೆ 'ಪ್ರಬುದ್ಧ ಭಾರತ'ದ ವ್ಯವಸ್ಥಾಪನೆ, ಆಶ್ರಮದ ಎಲ್ಲ ಕೆಲಸಗಳ ಮೇಲ್ವಿಚಾರಣೆ, ವೃದ್ಧೆಯಾದ ಮದರ್ ಸೇವಿಯರ್ ಅವರ ಸೇವೆಯ ಬಗ್ಗೆ ನಿಗಾ ಇಡುವುದು ಮುಂತಾದ ಜವಾಬ್ದಾರಿಗಳೆಲ್ಲ ಇದ್ದೇ ಇದ್ದವು. ಹೀಗಾಗಿ ಅವರು ಅವಿಶ್ರಾಂತವಾಗಿ ಕಾರ್ಯನಿರತರಾಗಿರುತ್ತಿದ್ದರು. ಅವರ ಕಾರ್ಯದಕ್ಷತೆಯೂ ಪ್ರಚಂಡವಾಗಿಯೇ ಇತ್ತು. ಅನೇಕ ಬಾರಿ ಅವರು ಬೆಳಗ್ಗೆ ಲಕ್ಕೆ ಕೆಲಸಕ್ಕೆ ಕುಳಿತರೆ ಮಧ್ಯಾಹ್ನ ಮೂರರವರೆಗೂ ಅದನ್ನು ಎಡೆ ಬಿಡದೆ ಮಾಡುತ್ತಿದ್ದರು. ನಂತರ ಸ್ನಾನಾಹಾರಗಳನ್ನು ಮುಗಿಸಿ, ಚಹವನ್ನು ಕುಡಿದು, ತಂಬಾಕು ಸೇವಿಸಿ, ಒಂದು ಗಂಟೆ ಕಾಲವಷ್ಟೇ ವಿಶ್ರಮಿಸುತ್ತಿದ್ದರು. ಅನಂತರ ಸ್ವಲ್ಪ ಸುತ್ತಾಡಿ ಬರುತ್ತಿದ್ದರು, ಇಲ್ಲವೇ ಎಲ್ಲರೊಂದಿಗೆ 'ಕ್ರೋಕೆ' (croquet) ಎಂಬ ಆಟವನ್ನು ಆಡುತ್ತಿದ್ದರು. ಕೆಲಸ ಮಾಡಿ ಬಳಲಿದ ಕಾರ್ಯಕರ್ತರು ಸ್ವಲ್ಪ ವಿಶ್ರಾಂತಿ ಹಾಗೂ ಸಂತೋಷ ಪಡೆಯಲಿ ಎಂಬ ಉದ್ದೇಶದಿಂದ ಮದರ್ ಸೇವಿಯರ್ ಈ ಆಟವನ್ನು ಚಾಲ್ತಿಗೆ ತಂದಿದ್ದರು. ಎಷ್ಟೋ ಬಾರಿ ವಿರಜಾನಂದರಿಗೆ ಸಮಯದ ಕಡೆಗೆ ಗಮನವೇ ಇರುತ್ತಿರಲಿಲ್ಲ. ಸಂಜೆಗೂ ಮುಂಚೆಯೇ ತಮ್ಮ ಕೆಲಸದಲ್ಲಿ ತೊಡಗಿಬಿಡುತ್ತಿದ್ದರು. ಆಗ ಮದರ್ ಸೇವಿಯರ್ ಬಂದು, ''ನಡೆ, ನಡೆ. ಸ್ವಲ್ಪ ಕ್ರೋಕೆ ಆಡುವೆಯಂತೆ'' ಎಂದು ಹೇಳಿ ಅವರನ್ನು ಕರೆದೊಯ್ಯುತ್ತಿದ್ದರು.

ಕೆಲವೊಮ್ಮೆ ಸ್ವಾಮೀಜಿಯವರ ಒಂದು ಸಾಲನ್ನು ತೆಗೆದುಕೊಂಡು, ಅದು ಅವರ ಭಾವನೆಗಳನ್ನು ಸರಿಯಾಗಿ ವ್ಯಕ್ತಪಡಿಸುತ್ತಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ವಿರಜಾನಂದರು ೨-೩ ಗಂಟೆಗಳ ಕಾಲ ತನ್ಮಯತೆಯಿಂದ ಆಲೋಚಿಸಬೇಕಾಗುತ್ತಿತ್ತು. ಇವರು ಕುಳಿತು ಹಸ್ತಪ್ರತಿಯನ್ನು ತಿದ್ದುವ ಕೆಲಸವನ್ನು ಮಾಡುತ್ತಿರುವಾಗಲೇ, ನೆಲ ಅಂತಸ್ತಿನಲ್ಲಿ ಕೈಯಚ್ಚಿನ ಯಂತ್ರದ ಕಾರ್ಯ ನಡೆಯುತ್ತಿತ್ತು. ಸ್ವಾಮೀಜಿಯವರ ಕೃತಿ ಸಂಗ್ರಹವು ಕ್ರಮವಾಗಿ ಸಂಪುಟಗಳಲ್ಲಿ ಪ್ರಕಟವಾಗುತ್ತಿತ್ತು. 'ಪ್ರಬುದ್ಧ ಭಾರತ'ದ ಪ್ರಚಾರ ಮತ್ತು ಜನಪ್ರಿಯತೆ ಹೆಚ್ಚಾಗತೊಡಗಿತ್ತು. ವಿರಜಾನಂದರಿಗೆ ಈ ಸಮಯದಲ್ಲಿ ಕೆಲಸ ಮಾಡಲು ಅಪೂರ್ವ ಅಂತಃಪ್ರೇರಣೆ ದೊರಕಿತ್ತು. ಈ ಕಾಲವು ಅವರ ಜೀವನದಲ್ಲಿ ಬಹಳ ಶ್ಲಾಘನೀಯವಾದ ಅಧ್ಯಾಯ ಎಂಬುದರಲ್ಲಿ ಸಂದೇಹವಿಲ್ಲ.

ತೋಟದ ಬಗ್ಗೆ ವಿರಜಾನಂದರಿಗೆ ತುಂಬ ಒಲವಿತ್ತು. ತೋಟದಲ್ಲಿ ಬೆಳೆದ ಸೇಬನ್ನು ಅವರು ಅನೇಕ ಸಲ ಮಠದ ಸದಸ್ಯರ ಮೂಲಕ ಮಾರಾಟ ಮಾಡಿ ಬರಲು ಸಂತೆಗೆ ಕಳುಹಿಸುತ್ತಿದ್ದರು. ಸ್ವಾಮೀಜಿಯವರು ಒಮ್ಮೆ ಮಠದ ಸಂನ್ಯಾಸಿಗಳ ಆದರ್ಶದ ಬಗ್ಗೆ ಮಾತನಾಡುತ್ತ, ''ನೀವೆಲ್ಲರೂ ಹೇಗಿರಬೇಕೆಂದರೆ, ಈಗ ಧ್ಯಾನಕ್ಕೆ ಕುಳಿತರೆ ಗಭೀರ ತನ್ಮಯತೆಯಿಂದ ಅದರಲ್ಲೇ ಮುಳುಗಿಹೋಗಬೇಕು; ಮತ್ತೆ ಧ್ಯಾನದಿಂದ ಎದ್ದ ಕೂಡಲೇ ತೋಟದ ಸೊಪ್ಪು-ತರಕಾರಿಗಳನ್ನು ಪೇಟೆಯಲ್ಲಿ ಮಾರಿಕೊಂಡು ಬರಲೂ ಕುಂಠಿತರಾಗಬಾರದು'' ಎಂದಿದ್ದರು. ಸ್ವಾಮೀಜಿಯವರ ಮಾತು ಮಾಯಾವತಿಯಲ್ಲಿ ಅಕ್ಷರಶಃ ಪಾಲಿಸಲ್ಪಟ್ಟಿತ್ತು.

೧೯೦೭ರ ಏಪ್ರಿಲ್‌ನಲ್ಲಿ ಖಗೇನರು (ವಿಮಲಾನಂದರು) ಮಾಯಾವತಿಯಲ್ಲಿ ಸೇವೆ ಸಲ್ಲಿಸಲು ಬಂದರು. ಹಿಂದೊಮ್ಮೆ ವಿರಜಾನಂದರು ಮಾಯಾವತಿಯಲ್ಲಿ ಇದ್ದಾಗ ಖಗೇನರೂ ಸಹ ಅಲ್ಲಿದ್ದರು. ಆದರೆ ಶಾರೀರಿಕ ಅಸ್ವಸ್ಥತೆಯಿಂದಾಗಿ ಮಾಯಾವತಿಯಿಂದ ಇಳಿದುಬರಬೇಕಾಯಿತು. ಬೆಂಗಳೂರಿನಲ್ಲಿದ್ದು ಅವರ ಆರೋಗ್ಯ ಉತ್ತಮಗೊಂಡ ನಂತರ ಅವರನ್ನು ಮತ್ತೆ ಮಾಯಾವತಿಗೆ ಕಳುಹಿಸಲಾಯಿತು. ಅಲ್ಲಿ ಒಂದು ವರ್ಷದವರೆಗೂ ಅವರ ಆರೋಗ್ಯ ಚೆನ್ನಾಗಿಯೇ ಇತ್ತು. ಆಶ್ರಮದ ಕೆಲಸಗಳಲ್ಲಿಯೂ ವಿಶೇಷವಾಗಿ ಸ್ವಾಮೀಜಿಯವರ ಕೃತಿಗಳ ಪರಿಷ್ಕರಣದಲ್ಲಿಯೂ ಅವರು ಬಹಳಷ್ಟು ಸಹಕರಿಸುತ್ತಿದ್ದರು. ಆದರೆ ೧೯೦೮ರ ಫೆಬ್ರವರಿಯಿಂದ ಅವರ ಹಳೆಯ ವ್ಯಾಧಿ ಅಸ್ತಮಾ ಮತ್ತೆ ಮರುಕಳಿಸಿತು. ದಿನದಿನಕ್ಕೂ ಶರೀರ ದುರ್ಬಲಗೊಂಡು ಆರೋಗ್ಯ ಕ್ಷೀಣಿಸಿತು. ವಿರಜಾನಂದರು ತಮ್ಮ ದೈನಂದಿನ ಕಾರ್ಯಚಟುವಟಿಕೆಗಳ ಮಧ್ಯೆ ಆಗಾಗ ಹೋಗಿ, ತಮ್ಮ ಪ್ರಿಯ ಸೋದರನ ಸೇವೆ ಮಾಡುತ್ತಿದ್ದರು. ಮಾಯಾವತಿಯಲ್ಲಿ ಸಿಗುತ್ತಿದ್ದ ಔಷಧ-ಪಥ್ಯಾದಿಗಳ ವ್ಯವಸ್ಥೆಯಲ್ಲಿ ಯಾವುದೇ ಕುಂದು ಇರತ್ತಿರಲಿಲ್ಲ; ಆದರೂ ವ್ಯಾಧಿಯು ದಿನದಿನಕ್ಕೂ ಉಲ್ಬಣಗೊಳ್ಳುತ್ತಲೇ ಹೋಯಿತು. ಅವರು ಸುಧಾರಿಸಿಕೊಳ್ಳುವರೆಂಬ ಆಸೆ ಕೈಬಿಟ್ಟು ಹೋಯಿತು. ೧೯೦೮ರ ಜುಲೈ ೨೩ರಂದು ರಾತ್ರಿಯ ಕೊನೆಯ ಜಾವದಲ್ಲಿ ಖಗೇನರು ತಮ್ಮ ಬಾಲ್ಯಸ್ನೇಹಿತನೂ, ಗುರುಭ್ರಾತನೂ ಆದ ಸ್ವಾಮಿ ವಿರಜಾನಂದರ ಸಮ್ಮುಖದಲ್ಲಿ ಭಗವಂತನನ್ನು ಸ್ಮರಿಸುತ್ತ ಕೊನೆಯುಸಿರನ್ನೆಳೆದರು.

ಕೊನೆಯವರೆಗೂ ಅವರು ಪ್ರಜ್ಞೆ ತಪ್ಪದೆ ಎಚ್ಚರವಾಗಿಯೇ ಇದ್ದರು. ಅವರು ಅದೆಷ್ಟು ಪ್ರಶಾಂತತೆಯಿಂದ ಚಿರನಿದ್ರೆಗೈದರೆಂದರೆ, 'ಮೃತ್ಯುವು ಅತಿ ಸರಳ-ಸಹಜ ಕ್ರಿಯೆ'ಯೆಂದೆನಿಸಿತು ವಿರಜಾನಂದರಿಗೆ. ತಮ್ಮ ಆಧ್ಯಾತ್ಮಿಕ ಜೀವನದ ಪ್ರಾರಂಭದಿಂದಲೂ ಯಾರು ತನ್ನ ನಿಷ್ಕಪಟ ಸೌಹಾರ್ದದಿಂದ ಬಲ-ಪ್ರೇರಣೆಗಳನ್ನು ನೀಡಿದ್ದನೋ ಆ ಪ್ರಾಣಸ್ನೇಹಿತನು ಇಹಲೋಕವನ್ನು ತ್ಯಜಿಸಿದ್ದ. ವಿರಜಾನಂದರಿಗೆ ಎಲ್ಲವೂ ಶೂನ್ಯವೆನಿಸಿತು. ಮಾಯಾವತಿ ಆಶ್ರಮದಿಂದ ಸ್ವಲ್ಪ ದೂರದಲ್ಲಿ ಹರಿಯುತ್ತಿದ್ದ ಕಲ್ಲು ಹರಳುಗಳಿಂದ ಆವೃತವಾದ ಝರಿಯ ತೀರದಲ್ಲಿ ವಿಮಲಾನಂದರ ಪಾಂಚಭೌತಿಕ ಶರೀರವನ್ನು ಅಗ್ನಿಗೆ ಅರ್ಪಿಸಲಾಯಿತು. ಎಂಟು ವರ್ಷಗಳ ಹಿಂದೆ ಮತ್ತೊಬ್ಬ ಮಹಾತ್ಮರ ದೇಹವನ್ನೂ ಸಹ ಇದೇ ಸ್ಥಳದಲ್ಲಿ ದಹಿಸಲಾಗಿತ್ತು. ಅವರೇ ಕ್ಯಾಪ್ಟನ್ ಸೇವಿಯರ್. ಸ್ವಾಮೀಜಿಯವರು ಮಾಯಾವತಿಯಲ್ಲಿದ್ದಾಗ ಶತಪಥ ತಿರುಗುತ್ತ ಉತ್ತೇಜಿತರಾಗಿ ಅವರ ಬಗ್ಗೆ ಮತ್ತೆ ಮತ್ತೆ, — ''He was a martyr to the cause'' ('ಆತನು ಮಹದುದ್ದೇಶಕ್ಕಾಗಿ ಆತ್ಮತ್ಯಾಗ ಮಾಡಿದ ಹುತಾತ್ಮ') ಎಂದಿದ್ದರು.

ವಿರಜಾನಂದರು ಮಾಯಾವತಿಯ ಅಧ್ಯಕ್ಷರಾದ ಆರು ತಿಂಗಳಲ್ಲಿ ಗುರುದಾಸ್ ಮಹಾರಾಜರು (ಮುಂದೆ ಸ್ವಾಮಿ ಅತುಲಾನಂದರು) ಅಲ್ಲಿಗೆ ಸೇವೆ ಸಲ್ಲಿಸಲು ಬಂದರು. ಇವರೊಬ್ಬ ಡಚ್-ಅಮೆರಿಕನ್. ಅಮೆರಿಕಾದಲ್ಲಿ ಇವರು ಸ್ವಾಮೀಜಿಯವರನ್ನು ನೋಡಿದ್ದರು. ನಂತರ ಪೂಜ್ಯ ಸ್ವಾಮಿ ಅಭೇದಾನಂದರ ಹಾಗೂ ಸ್ವಾಮಿ ತುರೀಯಾನಂದರ ಸಂಸರ್ಗಕ್ಕೆ ಬಂದು ಸಂಸಾರ ತ್ಯಾಗ ಮಾಡಿದ್ದರು. ಹರಿ ಮಹಾರಾಜರೇ ಅವರಿಗೆ 'ಗುರುದಾಸ್' ಎಂಬ ಹೆಸರನ್ನಿಟ್ಟಿದ್ದರು. ೧೯೦೬ರಲ್ಲಿ ಅವರು ಪ್ರಪ್ರಥಮವಾಗಿ ಅಮೆರಿಕಾಯಿಂದ ಬೇಲೂರು ಮಠಕ್ಕೆ ಬಂದರು. ಮಠದಿಂದ ಅವರನ್ನು ಮಾಯಾವತಿಗೆ ಕಳುಹಿಸಲಾಗಿತ್ತು. 'ಪ್ರಬುದ್ಧ ಭಾರತ'ದ ಕೆಲಸಗಳಲ್ಲಿ ಅವರು ತುಂಬ ಸಹಕರಿಸುತ್ತಿದ್ದರು.[೨]

ಸೋದರ ಸಂನ್ಯಾಸಿಗಳಾದ ಪ್ರಕಾಶಾನಂದ, ಬೋಧಾನಂದ ಮತ್ತು ಪರಮಾನಂದರು ಅಮೆರಿಕಾದಲ್ಲಿ ವೇದಾಂತ ಪ್ರಚಾರ ಕಾರ್ಯವನ್ನು ಸ್ತುತ್ಯರ್ಹ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಿದ್ದಾರೆ ಎಂಬ ವಿಷಯವನ್ನು ಮಾಯಾವತಿಯಲ್ಲಿ ತಿಳಿದ ವಿರಜಾನಂದರು ಸೋದರರ ಯಶಸ್ಸಿನಿಂದ ಪುಳಕಿತರಾದರು. ಹಾಗೂ 'ಪ್ರಬುದ್ಧ ಭಾರತ'ದಲ್ಲಿ ಅವರ ಭಾಷಣಗಳನ್ನು ಆಗಾಗ ಮುದ್ರಿಸುತ್ತಿದ್ದರು. ಪ್ರಕಾಶಾನಂದರು ಸ್ಯಾನ್‌ಫ್ರಾನ್ಸಿಸ್ಕೋದಲ್ಲಿ ಸ್ವಾಮಿ ತ್ರಿಗುಣಾತೀತರಿಗೆ ಸಹಾಯಕರಾಗಿದ್ದರು; ಪರಮಾನಂದರು ಸ್ವಾಮಿ ಅಭೇದಾನಂದರು ನಡೆಸುತ್ತಿದ್ದ ನ್ಯೂಯಾರ್ಕ್ ವೇದಾಂತ ಸಮಿತಿಯಲ್ಲಿ ಹಾಗೂ ಬೋಧಾನಂದರು ಪಿಟ್ಸ್‌ಬರ್ಗ್‌ನಲ್ಲಿ ಪ್ರಚಾರ ಕಾರ್ಯವನ್ನು ನಡೆಸುತ್ತಿದ್ದರು. ಈಗ ೧೯೦೬ನೇ ಇಸವಿ ನಡೆಯುತ್ತಿದೆ. ಅಭೇದಾನಂದರು ವೇದಾಂತ ಪ್ರಚಾರಕ್ಕೆಂದು ಕೆಲದಿನಗಳ ಮಟ್ಟಿಗೆ ಲಂಡನ್ನಿಗೆ ಹೋಗಿದ್ದಾಗ ಅಲ್ಲೊಂದು ವೇದಾಂತ ಸಮಿತಿಯನ್ನು ಸ್ಥಾಪಿಸಿದರು.

ಭಾರತದಲ್ಲಿಯೂ ಶ್ರೀರಾಮಕೃಷ್ಣ-ವಿವೇಕಾನಂದರ ಭಾವಧಾರೆ ಮತ್ತು ಅವರ ಆದರ್ಶಕ್ಕೆ ಅನುಗುಣವಾದ ಲೋಕ ಸೇವಾ ಕಾರ್ಯಗಳು ಕ್ರಮವಾಗಿ ವಿಸ್ತಾರಗೊಳ್ಳುತ್ತಿದ್ದವು. ಶ್ರೀರಾಮಕೃಷ್ಣರ ಒಬ್ಬೊಬ್ಬರು ಸಂನ್ಯಾಸಿ ಶಿಷ್ಯರು ಒಬ್ಬೊಬ್ಬ ದಿಕ್ಪಾಲಕನಂತೆ ದಿಕ್ಕುದಿಕ್ಕಿಗೂ ಹರಡಿ, ತಮ್ಮ ತ್ಯಾಗ-ಭಾಸ್ವರವಾದ, ಜ್ಞಾನ-ಭಕ್ತಿಮಯವಾದ ಆಧ್ಯಾತ್ಮಿಕ ಜೀವನವನ್ನು ಜಾಗರೂಕತೆಯಿಂದ ಸೇವಾಕಾರ್ಯಗಳಲ್ಲಿ ವಿನಿಯೋಗಿಸಿ, ಮುಂದಿನ ಜನಾಂಗದ ಹೃನ್ಮನ ಗಳಲ್ಲಿ ವಿಶ್ವಾಸ, ಉತ್ಸಾಹಗಳನ್ನು ತುಂಬುತ್ತಿದ್ದರು. ಈ ಉತ್ಸಾಹದ ಚುರುಕು ದೂರದ ಹಿಮಾಲಯದಲ್ಲಿದ್ದ ವಿರಜಾನಂದರನ್ನು ಮತ್ತು ಇತರ ಸೋದರರನ್ನು ಮುಟ್ಟದೆ ಇರಲಿಲ್ಲ. ಅವರೆಲ್ಲರ ಅಂತರ್ಯದಲ್ಲಿಯೂ ''ವಾಹ್ ಗುರೂಜೀಕೀ ಫತೇ'' (ಗುರೂಜಿಗೆ ಜಯವಾಗಲಿ) ಎಂಬ ನುಡಿ ಧ್ವನಿಸುತ್ತಿತ್ತು. ಸ್ವಾಮೀಜಿಯವರ ಕವಿತೆಯ ಸಾಲುಗಳು ನೆನಪಾಗತೊಡಗಿದವು:

**ನೀನೆನ್ನ ಬೆನ್ನ ಹಿಂದೆ ಹಿಂದೆಯೇ ಇರುತಿರುವೆ**
**ಅದರಿಂದಲೇ ನಿನ್ನ ನಗುಮುಖವ**
**ಹಿಂತಿರುಗಿ ನಾ ನೋಡುತಿರುವೆ**
**ಮತ್ತೆ ಮತ್ತೆ ಹಾಡುವೆ, ನಾನಾರಿಗೂ ಭಯಪಡೆ,**
**ಜನನ ಮರಣವೆರಡೂ ಬಿದ್ದಿವೆ ನನ್ನ ಪದತಲದಿ,**
**ದಯಾನಿಧೆ, ನಾ ನಿನ್ನ ದಾಸ ಜನುಮ ಜನುಮದಿ,**
**ನಿನ್ನ ರೀತಿಗಳೇನೋ ನಾನರಿಯೆ**
**ನನ್ನ ಗತಿಯಾದರೂ ಏನು? ನಾ ತಿಳಿಯೆ**
**ಯಾರಿಗೆ ಬೇಕು ಅದರ ತಿಳಿವು ತಾನೆ?**

ಇಂತಹ ಅದ್ಭುತ ಕರ್ಮವೀರರಾಗಿದ್ದರು ಶಶಿ ಮಹಾರಾಜ್. ಶ್ರೀರಾಮಕೃಷ್ಣರ ತಿರೋಧಾನದ ನಂತರ ಸುದೀರ್ಘ ಹನ್ನೊಂದು ವರ್ಷಗಳು, ಅವರು ಮಠದ ಪ್ರಾಂಗಣವನ್ನೂ ಬಿಟ್ಟು ಹೋಗದೆ, ಏಕನಿಷ್ಠೆಯಿಂದ ಶ್ರೀರಾಮಕೃಷ್ಣರ ಪೂಜೆ ಸೇವೆಗಳಲ್ಲಿ ಹಾಗೂ ಸೋದರ ಸಂನ್ಯಾಸಿಗಳ ಪರಿಚರ್ಯೆಯಲ್ಲೇ ಕಳೆದಿದ್ದರು; ಅಂತಹ ಶಶಿ ಮಹಾರಾಜರೂ ಸಹ ನೇತಾರರಾದ ವಿವೇಕಾನಂದರ ಒಂದೇ ಮಾತಿಗೆ ಮಣಿದು, ಅವರ ಆದೇಶ ಪಾಲನೆಗಾಗಿ ದೂರದ

[೨] ಗುರುದಾಸ್ ಮಹಾರಾಜರು ೧೯೧೧ರಲ್ಲಿ ಅಮೆರಿಕಾಗೆ ಹಿಂದಿರುಗಿ, ಮತ್ತೆ ೧೯೧೪ರಲ್ಲಿ ಭಾರತಕ್ಕೆ ಬಂದರು. ನಾಲ್ಕು ವರ್ಷಗಳನ್ನು ಇಲ್ಲಿ ಕಳೆದ ಮೇಲೆ ೧೯೧೮ರಲ್ಲಿ ಮತ್ತೆ ಅಮೆರಿಕಾಗೆ ಹೋಗಬೇಕಾಗಿ ಬಂತು. ೧೯೨೦ರಲ್ಲಿ ಭಾರತಕ್ಕೆ ಹಿಂತಿರುಗಿದ ಅವರು ಮತ್ತೆಲ್ಲಿಗೂ ಹೋಗಲಿಲ್ಲ. ಈ ಪುಸ್ತಕವನ್ನು ಬರೆದಾಗ, (ಅಂದರೆ ೧೯೫೬ರಲ್ಲಿ) ಮುಸ್ಸೂರಿ ಪರ್ವತದ ಬಾರ್ಲೋಗಂಜಿನಲ್ಲಿರುವ 'ಶ್ರೀಶಾರದಾ ಕುಟೀರ' ಎಂಬ ಹೆಸರಿನ ಆಶ್ರಮದಲ್ಲಿ ಅವರು ವಾಸಿಸುತ್ತಿದ್ದರು. ಚಳಿಗಾಲದ ಕೆಲವು ತಿಂಗಳನ್ನು ಅವರು ಕಂಖಲ್ಲಿನ ಸೇವಾಶ್ರಮದಲ್ಲಿ ಕಳೆದು ಹೋಗುತ್ತಿದ್ದರು. ಅವರ ವಯಸ್ಸು ಈಗ ೮೮. ಅವರ ಗಭೀರ ಈಶ್ವರಪ್ರೇಮ ಮತ್ತು ಜ್ಞಾನ ವೈರಾಗ್ಯಮಯ ಜೀವನದ ಛಾಯೆ ಅವರ ಬಾಲಕಸದೃಶವಾದ ಮುಖಮಂಡಲದಲ್ಲಿ ಅರಳಿ ತೋರುತ್ತದೆ. ಅವರಿಗೆ ಬಂಗಾಳಿ ಭಾಷೆ ಅವರಿಗೆ ಗೊತ್ತಿಲ್ಲ, ಹೆಚ್ಚು ಮಾತನ್ನೂ ಆಡುವವರಲ್ಲ. ಆದರೂ ಸ್ವಲ್ಪ ಹೊತ್ತಿನ ಅವರ ಸಂಗವು ಮನಸ್ಸಿಗೆ ಒಂದು ಅಲೌಕಿಕ ಶಾಂತಿಯ ಅನುಭವವನ್ನು ನೀಡುತ್ತದೆ.

ಮದ್ರಾಸಿಗೆ ವೇದಾಂತ ಪ್ರಚಾರಕ್ಕೆಂದು ಹೊರಟುಬಂದಿದ್ದರು. ಕೇವಲ ಮದ್ರಾಸಿನಲ್ಲೇ ಅಲ್ಲದೆ, ಸುತ್ತಮುತ್ತಲ ಸ್ಥಳಗಳಲ್ಲಿಯೂ ಸುತ್ತಾಡಿ, ರಾಮಕೃಷ್ಣ-ವಿವೇಕಾನಂದರ ಜೀವನದ ಬೆಳಕಿನ ಹಿನ್ನೆಲೆಯಲ್ಲಿ ಸನಾತನ ಹಿಂದೂಧರ್ಮವನ್ನು ಜನಸಾಮಾನ್ಯರಲ್ಲಿ ಹರಡುತ್ತಿದ್ದರು. ಇಷ್ಟರಲ್ಲೆ ಅವರ ಪಾಂಡಿತ್ಯ ಹಾಗೂ ತಾತ್ತ್ವಿಕ ದೃಷ್ಟಿಗೆ ಕನ್ನಡಿ ಹಿಡಿದಂತಹ ಅವರ ಆರು ಉಪನ್ಯಾಸಗಳು 'Universe and Man' (ವಿಶ್ವ ಮತ್ತು ಮಾನವ) ಪುಸ್ತಕ ರೂಪದಲ್ಲಿ ಪ್ರಕಟವಾಗಿದ್ದವು. ೧೯೦೭ರ ನವೆಂಬರ್ ತಿಂಗಳಲ್ಲಿ ಮದ್ರಾಸಿನ ಮೈಲಾಪುರದಲ್ಲಿ ತನ್ನ ಸ್ವಂತ ನೆಲೆಯಲ್ಲಿ ರಾಮಕೃಷ್ಣ ಮಠವು ಸ್ಥಾಪಿತವಾಗುತ್ತಿದೆ ಎಂಬುದನ್ನು ಕೇಳಿದ ವಿರಜಾನಂದರು ಹರ್ಷಗೊಂಡರು. 'ಜ್ಞಾನ-ಭಕ್ತಿ-ಕರ್ಮ' ಈ ಮೂರೂ ಯೋಗಗಳ ಮೂರ್ತರೂಪವೇ ಶ್ರೀ ಮಹಾರಾಜರು ಎಂದೆನಿಸಿತು ವಿರಜಾನಂದರಿಗೆ.

ಪೂಜ್ಯರಾದ ಸ್ವಾಮಿ ಶಿವಾನಂದರು (ಮಹಾಪುರುಷ ಮಹಾರಾಜ್) ಸ್ವಾಮೀಜಿಯವರ ಆದೇಶದ ಮೇರೆಗೆ ೧೯೦೨ರ ಜುಲೈ ತಿಂಗಳಲ್ಲಿ , ಬೇಲೂರು ಮಠದ ಶಾಖಾಕೇಂದ್ರದ ರೂಪದಲ್ಲಿ 'ರಾಮಕೃಷ್ಣ ಅದ್ವೈತ ಆಶ್ರಮ'ವನ್ನು ಕಾಶಿಯಲ್ಲಿ ಸ್ಥಾಪಿಸಿದ್ದರು. ಈ ಆಶ್ರಮವೂ ಸಹ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂತೋಷಜನಕವಾದ ರೀತಿಯಲ್ಲಿ ನಡೆಯುತ್ತಿತ್ತು. ಯುವಕರಿಗೆ ಬ್ರಹ್ಮಚರ್ಯ ಶಿಕ್ಷಣ, ರಾಮಕೃಷ್ಣ ವಿವೇಕಾನಂದರ ಆದರ್ಶ-ಉಪದೇಶಗಳಿಗನುಗುಣವಾಗಿ ವೇದಾಂತ ಪ್ರಚಾರ ಈ ಎರಡು ಉದ್ದೇಶಗಳಿಗಾಗಿ ಮಹಾಪುರುಷಜೀಯವರು ಸದ್ಗ್ರಂಥ ಪಠಣ, ಪುಸ್ತಕ ಪ್ರಕಾಶನ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಅಷ್ಟೇ ಅಲ್ಲದೆ ಎಲ್ಲ ಜಾತಿ-ವರ್ಣದ ಬಡ ಮಕ್ಕಳಿಗಾಗಿ ಹಿಂದೀ, ಸಂಸ್ಕೃತ ಮತ್ತು ಇಂಗ್ಲಿಷನ್ನು ತಕ್ಕಮಟ್ಟಿಗೆ ಕಲಿಸುವ ಉದ್ದೇಶದಿಂದ ಉಚಿತ ಶಾಲೆಯನ್ನೂ ಪ್ರಾರಂಭಿಸಿದ್ದರು. ಮೊದಲು ಮಠವು ಬಾಡಿಗೆಯ ಮನೆಯಲ್ಲಿದ್ದು, ಈಗ ಶಾಶ್ವತ ವಸತಿಯನ್ನು ಕಲ್ಪಿಸಿ ಕೊಳ್ಳಲಾಗಿತ್ತು.

ಸ್ವಾಮಿ ವಿವೇಕಾನಂದರ ಜೀವಿತದ ಕಾಲದಲ್ಲಿ, ಅವರ ಸೇವಾದರ್ಶಗಳಿಂದ ಪ್ರೇರಣೆಯನ್ನು ಪಡೆದ ಕಾಶಿಯ ಯುವಕರ ಗುಂಪೊಂದು ನೊಂದು ಬೆಂದ ದುಃಖಪೀಡಿತರಿಗೋಸ್ಕರ ಅಲ್ಲಿನ ರಾಮಪುರಪಲ್ಲಿ ಎಂಬಲ್ಲಿ , ಮುರಿದ ಮನೆಯೊಂದರಲ್ಲಿ 'ಸೇವಾಶ್ರಮ'ವನ್ನು ಪ್ರಾರಂಭಿಸಿತ್ತು. ಅದರ ಸೇವಾಕಾರ್ಯ ಗಳೂ ಸಹ ನಿಧಾನವಾಗಿ ಬೆಳೆಯುತ್ತಿದ್ದವು. ೧೯೦೮ರ ಏಪ್ರಿಲ್ ೧೧ರಂದು ಅಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದರು ಸೇವಾಶ್ರಮದ ಶಾಶ್ವತ ಕಟ್ಟಡಕ್ಕಾಗಿ 'ಲಾಕ್ಷಾ' ಎಂಬಲ್ಲಿ ಖರೀದಿಸಿದ ಜಮೀನಿನಲ್ಲಿ ಶಂಕು ಸ್ಥಾಪನೆಯನ್ನು ಮಾಡಿದರು. ಸ್ವಾಮಿ ವಿಜ್ಞಾನಾನಂದರ ಮೇಲ್ವಿಚಾರಣೆಯಲ್ಲಿ ಕಟ್ಟಡ ನಿರ್ಮಾಣ ಕಾರ್ಯವೂ ನಡೆಯುತ್ತಿತ್ತು. ಕಂಖಲ್ ಮತ್ತು ಬೃಂದಾವನದ ಸೇವಾಶ್ರಮಗಳೂ ಸಹ ತತ್ಪರತೆಯಿಂದ ದುಡಿಯುತ್ತ ಏಳ್ಗೆಯತ್ತ ಸಾಗಿದ್ದವು.

ಸಂಘದ ಕಾರ್ಯದರ್ಶಿಗಳಾದ ಸ್ವಾಮಿ ಶಾರದಾನಂದರು ಕೊಲ್ಕತ್ತೆಯ ನಾನಾ ಸ್ಥಳಗಳಲ್ಲಿ ಧಾರ್ಮಿಕ ವಿಷಯಗಳ ಬಗ್ಗೆ ತರಗತಿಗಳನ್ನು ನಡೆಸಿ, ಯುವಕರ ಹೃದಯದಲ್ಲಿ ತ್ಯಾಗ-ಸೇವೆಯ ಆದರ್ಶವನ್ನು ದೃಢಗೊಳಿಸುತ್ತಿದ್ದರು. ಸ್ವಾಮಿ ನಿರ್ಮಲಾನಂದರು ಮತ್ತು ಶುದ್ಧಾನಂದರೂ ಸಹ ಈ ರೀತಿಯ ಭಾಷಣಾದಿಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಅನೇಕ ಯುವಕರು ರಾಮಕೃಷ್ಣ-ವಿವೇಕಾನಂದರ ಆದರ್ಶಗಳಿಂದ ಪ್ರಭಾವಿತರಾಗಿ 'ಬಹುಜನ ಹಿತಾಯ, ಬಹುಜನ ಸುಖಾಯ' ತಮ್ಮ ಜೀವನವನ್ನು ಸಮರ್ಪಿಸಲು ಸಿದ್ಧರಾಗಿದ್ದರು, ಕೆಲವರು ಮಠಕ್ಕೂ ಸೇರಿದ್ದರು. ಒರಿಸ್ಸಾ , ಪಶ್ಚಿಮ ಬಂಗಾಳ ಮತ್ತು ಶ್ರೀಹಟ್ಟಾದ ದುರ್ಭಿಕ್ಷ ಪೀಡಿತರಿಗೆ ಸೇವೆ ಸಲ್ಲಿಸಲು ಮಠದ ಸಂನ್ಯಾಸಿಗಳು ಟೊಂಕಕಟ್ಟಿ ದುಡಿದರು. ಸಂಸಾರ ತ್ಯಾಗಿಗಳಾದ ನಿರ್ಲಿಪ್ತ ಸಂನ್ಯಾಸಿಗಳು ಸಂಸಾರದಲ್ಲಿ ನೊಂದವರಿಗೆ ಮರುಗಿ ಅವರಿಗಾಗಿ ನಿಸ್ವಾರ್ಥ ಸೇವೆ ಮಾಡಿದ್ದರು. ಇದು ಇಡೀ ಸಮಾಜದಲ್ಲಿ ಒಂದು ಹೊಸ ಪಾವನ ಶಕ್ತಿಯನ್ನು ಸಂಚಾರಗೊಳಿಸಿತ್ತು. ಶ್ರೀರಾಮಕೃಷ್ಣರು ಈಗ ಸಶರೀರಿಯಾಗಿ ಇಲ್ಲದಿದ್ದರೂ ಅವರ ಅಭಿನ್ನಮೂರ್ತಿಯಾದ, 'ಲಜ್ಜಾಪಟಾವೃತೆ'ಯಾದ ಮಹಾಶಕ್ತಿ ಶ್ರೀಮಾತೆಯವರಿದ್ದಾರೆ. ವಿವೇಕಾನಂದರಿಲ್ಲದಿದ್ದರೂ, ಎಲ್ಲರ ಶಿರೋಮಣಿಯಾದ, ಶ್ರೀರಾಮಕೃಷ್ಣರ ಮಾನಸಪುತ್ರರಾದ ಸ್ವಾಮಿ ಬ್ರಹ್ಮಾನಂದರಿದ್ದಾರೆ , ಮಠದ ಅಧ್ಯಕ್ಷರಾಗಿ. ಇವರೇ ಸ್ವಾಮೀಜಿಯವರ ನೆಚ್ಚಿನ 'ರಾಜಾ', 'ಅಭಿನ್ನ ಹೃದಯದ ಸಖ.' ವಿವೇಕಾನಂದರು ಹೊತ್ತಿದ್ದ ಕಠಿಣ ಜವಾಬ್ದಾರಿಯನ್ನು ಅವರೀಗ ತಮ್ಮ ವಿಶಾಲ ಹೆಗಲಮೇಲೆ ಹೊತ್ತಿದ್ದಾರೆ. ತಮ್ಮ ಸ್ವಭಾವಸಿದ್ಧ ಊರ್ಧ್ವಮುಖೀ, ಸಮಾಧಿನಿಷ್ಠ ಮನಸ್ಸನ್ನು ಧರೆಗಿಳಿಸಿ, ಶ್ರೀರಾಮಕೃಷ್ಣ ಸಂಘದ ದೃಢತೆ ಮತ್ತು ವಿಸ್ತರಣೆಗೆ ತಮ್ಮ ಪ್ರಖರ ದೃಷ್ಟಿಯನ್ನಿಟ್ಟಿದ್ದಾರೆ. ರಾಜಾಮಹಾರಾಜರ ನೀರವ ಆಶೀರ್ವಾದ ಹಾಗೂ ಶುಭಹಾರೈಕೆಗಳು ದಿಸೆದಿಸೆಗೂ ಪಸರಿಸಿ ಭಾರತದಲ್ಲೂ , ಭಾರತದ ಹೊರಗೂ ಇರುವ ಸೇವಾ ನಿರತರನ್ನು ಪ್ರೋತ್ಸಾಹಿಸಿ ನವಚೇತನವನ್ನು ತುಂಬುತ್ತಿದೆ.

*(ಮುಂದುವರಿಯುವುದು)*

''ಯಾವ ಚೈತನ್ಯವು ಎಚ್ಚರ, ಸ್ವಪ್ನ , ಗಾಢನಿದ್ರೆಗಳೆಂಬ ಮೂರು ಅವಸ್ಥೆಗಳಲ್ಲಿಯೂ ಬಹು ಸ್ಪಷ್ಟವಾಗಿ ತೋರಿಕೊಳ್ಳುವುದೋ; ಯಾವುದು ಚತುರ್ಮುಖ ಬ್ರಹ್ಮನಿಂದ ಇರುವೆಯ ವರೆಗಿನ ಎಲ್ಲ ವಿಧದ ಶರೀರಗಳಲ್ಲಿಯೂ ಜಗತ್ ಸಾಕ್ಷಿಯ ರೂಪದಿಂದ ವ್ಯಾಪಿಸಿಕೊಂಡಿದೆಯೋ ಅದೇ ನಾನು, ಕಣ್ಣಿಗೆ ಕಾಣುತ್ತಿರುವ ಈ ಶರೀರವಲ್ಲ ಎಂಬ ದೃಢವಾದ ಪ್ರಜ್ಞೆಯು ಯಾರಿಗಿರುವುದೋ ಅವನು ಚಂಡಾಲನಾಗಿರಲಿ ಅಥವಾ ಬ್ರಾಹ್ಮಣನಾಗಿರಲಿ, ಅವನೇ ಗುರುವು, ಎಂಬುದು ನನ್ನ ತಿಳುವಳಿಕೆ.''

*— ಶ್ರೀಶಂಕರಾಚಾರ್ಯ (ಮನೀಷಾಪಂಚಕ, ೧)*

# ಶ್ರೀಮಾತೆಯವರ ಪತ್ರಗಳು – ೧೧

ಅನುವಾದ: ಪ್ರವ್ರಾಜಿಕಾ ಧರ್ಮಪ್ರಾಣಾ

### ಪತ್ರ ೫೬

ಓಂ ರಾಮಕೃಷ್ಣ ಜಯತಿ

೧೭.೩.೧೯೧೦

ಮಗೂ,

ನಿನ್ನ ಪತ್ರ ಸಿಕ್ಕಿ ನಾನು ಎಷ್ಟೊಂದು ಆನಂದವನ್ನು ಅನುಭವಿಸಿದೆ ಎಂಬುದನ್ನು ನಿನಗೆ ಹೇಗೆ ಬರೆದು ತಿಳಿಸಲಿ! ನೀನು ಅಂಚೆಯ ಮೂಲಕ ಕಳುಹಿಸಿರುವ ಸೀರೆ ನನಗೆ ತಲುಪಿತು. ರಾಖಾಲ್ (ಮಹಾರಾಜ್) ಬೇಲೂರಿಗೆ ಬಂದಿದ್ದಾರೆ (ಬಂದಿದ್ದಾನೆ) ಮತ್ತು ಕಲ್ಕತ್ತಾದ ಮಕ್ಕಳು ಚೆನ್ನಾಗಿದ್ದಾರೆ. ನಿನಗೆ ನನ್ನ ಆಶೀರ್ವಾದ. ದೇವಮಾತಾಳಿಗೆ ಹೇಳು, '..ನಿನಗೆ ಆಶೀರ್ವಾದ ಮಾಡಿದ್ದಾರೆ' ಎಂದು. ಸುರೇಂದ್ರ, ವಿಜಯನ ತಾಯಿಗೆ ಈಗಲೂ ಹುಷಾರಾಗಿಲ್ಲ ಎಂದು ಕೇಳಿ ನಾನು ಚಿಂತಿತಳಾಗಿದ್ದೇನೆ. ಕಂಖಲ್‌ನಲ್ಲಿರುವ ತುಳಸಿ, ಜಿತೇನ್ ಚೆನ್ನಾಗಿದ್ದಾರೆಂದು ಕೇಳಿ ಸಮಾಧಾನವಾಯಿತು. ಅವರಿಗೆ ನನ್ನ ಆಶೀರ್ವಾದಗಳನ್ನು ತಿಳಿಸು. ಶರತ್ ಈಗಲೂ ಕಾಶಿಯಲ್ಲಿದ್ದಾನೆ. ಶ್ರೀಯುತ ನಾರಾಯಣನ ಮಗಳ ವಿವಾಹಕ್ಕಾಗಿ ಪ್ರಯತ್ನ ನಡೆಯುತ್ತಿದೆ. ಠಾಕೂರ್ ಅವರಿಗೆ ಮಂಗಳವನ್ನುಂಟು ಮಾಡುವರು. ಅದಕ್ಕಾಗಿ ಅವನು ತುಂಬಾ ಚಿಂತೆ ಮಾಡುವ ಅಗತ್ಯವಿಲ್ಲ. ಅವನಿಗೆ ನನ್ನ ಆಶೀರ್ವಾದವನ್ನು ತಿಳಿಸು. ಸದ್ಯ ನಾನು ಚೆನ್ನಾಗಿದ್ದೇನೆ, ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೆ. ನೀನು ಎಲ್ಲರಿಗೂ ನನ್ನ ಆಶೀರ್ವಾದಗಳನ್ನು ತಿಳಿಸು. ಮಧ್ಯೆ ಮಧ್ಯೆ ಪತ್ರ ಬರೆ.

ಇತಿ, ೧೩೧೬ನೇ ವರ್ಷ, ೨ನೇ ಚೈತ್ರ, ಬುಧವಾರ

ನಿನ್ನ ಮಂಗಳಮಯಿ ಮಾತೃದೇವಿ

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*

*The Swami Ramakrishnanandaji*
*Sri Ramakrishna Mission*
*Mylapore, Madras*

### ಪತ್ರ ೫೭

ಶ್ರೀ ಶ್ರೀ ಹರಿ

೧೩೧೬ನೇ ವರ್ಷ, ೭.೪.೧೯೧೦

ಜಯರಾಂಬಾಟಿ, ೨೪ನೇ ಚೈತ್ರ

ಮಂಗಳಕರವಾಗಲಿ.

ಪರಮ ಶುಭಾಶೀರ್ವಾದ. ವಿಶೇಷವೇನೆಂದರೆ,

ನಿನ್ನ ಪತ್ರ ಸಿಕ್ಕಿತು. ಶ್ರೀಮತಿ ಜಯಲಕ್ಷ್ಮಿಗೆ ನನ್ನ ಆಶೀರ್ವಾದ ತಿಳಿಸು. ನೀವೆಲ್ಲರೂ ಹೇಗಿದ್ದೀರಿ ಎಂದು ಬರೆ ಮತ್ತು ನನ್ನ ಆಶೀರ್ವಾದಗಳನ್ನು ಸ್ವೀಕರಿಸಿ.

ಇಲ್ಲಿ ಎಲ್ಲವೂ ಕ್ಷೇಮ. ನಿಮ್ಮೆಲ್ಲರ ಕ್ಷೇಮಕ್ಕೆ ಬರೆ.

ಇತಿ ನಿನ್ನ, (ತಾಯಿ)

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*

*The Swami Ramakrishnananda*
*Sri Ramakrishna Mission*
*Mylapore, Madras*

### ಪತ್ರ ೫೮

ಶ್ರೀ ಶ್ರೀ ದುರ್ಗೆಯ ಕೃಪೆ

೪.೫.೧೯೧೦, ೨೧ನೇ ವೈಶಾಖ

ಚಿರಂಜೀವಿಗೆ,

ಮಗೂ, ಈಗ ತಾನೇ ನೀನು ಕಳುಹಿಸಿರುವ ೨೦ ರೂಪಾಯಿ ಮನಿಯಾರ್ಡರ್ ಸಿಕ್ಕಿತು. ನಿಮಗೆಲ್ಲರಿಗೂ ನನ್ನ ಆಶೀರ್ವಾದಗಳು. ನಾನು ಚೆನ್ನಾಗಿದ್ದೇನೆ.

ಇತಿ,

*ಪತ್ರ ಪಡೆದವರ ಹೆಸರು ಮತ್ತು ವಿಳಾಸ*

*The Swami Ramakrishnananda*
*Sri Ramakrishna Mission*
*Mylapore, Madras*

### ಪತ್ರ ೫೯

ಶ್ರೀ ಶ್ರೀ ರಾಮಕೃಷ್ಣ ಪ್ರಭುವಿನ ಪಾದಗಳ ಭರವಸೆ

೨೨.೬.೧೯೧೦

ಜಯರಾಂಬಾಟಿ, ೧೩೧೭,

೮ನೇ ಆಷಾಢ

ಪರಮ ಪ್ರೀತಿಯ ಚಿರಂಜೀವಿ ಶ್ರೀಯುತ ಶಶಿಗೆ,

ಮಗೂ ಶಶಿ, ನಿನಗೆ ಎಷ್ಟೊಂದು ಕಷ್ಟವಾಗುತ್ತಿದೆ! ಮಗ ಪ್ರಕಾಶನನ್ನು ನಾನು ಇಲ್ಲಿಯೇ ಇರಿಸಿಕೊಂಡಿದ್ದೇನೆ. ರಾಧುವಿಗೆ ವಿವಾಹ ಪ್ರಸ್ತಾಪ (proposal) ಮಾಡಬೇಕು. ಪ್ರಕಾಶ ಇಲ್ಲದಿದ್ದರೆ ಅನುಕೂಲವಾಗುವುದಿಲ್ಲ. ಆಷಾಢ ೧೫ನೇ ದಿನದಂದು ಭಾವೀ ವರನಿಗೆ ಆಶೀರ್ವಾದ ಮಾಡಲು ಹೋಗುತ್ತೇನೆ. ೧೭ರಂದು ಅವರು ಕನ್ಯೆಗೆ ಆಶೀರ್ವಾದ ಮಾಡಲು ಬರುವರು.

ಈ ಕಾರ್ಯ ಮುಗಿದ ಮೇಲೆ ನಾನು ೧೯ರಂದು ಕಲ್ಕತ್ತೆಗೆ ಹೋಗುವೆನು. ನನ್ನನ್ನು ಕರೆದುಕೊಂಡು ಹೋಗಲೆಂದು ಇಲ್ಲಿ ಗೌರಿಯುಗಲ್ ಬಂದು ಕುಳಿತಿದ್ದಾನೆ. ಶ್ರೀಯುತ ಕೇದಾರನೂ

ಇಲ್ಲಿಗೆ ಬಂದು ಕೆಲವು ದಿನಗಳಾಯಿತು. ಇಲ್ಲಿ ಚೆನ್ನಾಗಿ ಮಳೆ ಸುರಿಯುತ್ತಿದೆ. ನಿನ್ನ ಶರೀರ ಈಗಲೂ ಅದೇ ರೀತಿ ಕಾಯಿಲೆಯಿಂದಿದೆಯೋ ಅಥವಾ ಸ್ವಲ್ಪ ಕಡಿಮೆಯಾಗಿದೆಯೋ ಎಂದು ಬರೆದು ತಿಳಿಸು. ನಿನಗೆ ನನ್ನ ಆಶೀರ್ವಾದಗಳು ಹಾಗೂ ಎಲ್ಲ ಭಕ್ತ ವೃಂದದವರಿಗೂ ತಿಳಿಸು. ಪ್ರಕಾಶನು ೧೯ನೇ ತಾರೀಖಿನಂದು ಖಡ್ಗಪುರದವರೆಗೆ ಹೋಗುವನು. ಆಮೇಲೆ ಅಲ್ಲಿಂದ ನಿನ್ನಲ್ಲಿಗೆ ಹೋಗಬಹುದೆಂದು ಅನ್ನಿಸುತ್ತಿದೆ.

ಇತಿ ಮಂಗಳವನ್ನು ಬಯಸುವ ನಿನ್ನ ತಾಯಿ.

ಶ್ರೀಮತಿ ಜಯಲಕ್ಷ್ಮಿಗೆ ಆಶೀರ್ವಾದವನ್ನು ತಿಳಿಸು.

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Swami Ramakrishnananda*
*Brodies' Road*
*Mylapore, Madras*

**ವಿವರಣೆ:** ಪಶ್ಚಿಮ ಬಂಗಾಳದಲ್ಲಿ ವಿವಾಹ ಪ್ರಸ್ತಾಪವಾದ ಮೇಲೆ ಹುಡುಗ ಮತ್ತು ಕನ್ಯೆಯ ಮನೆಯವರು ಪರಸ್ಪರ ಭೇಟಿಯಾಗುತ್ತಾರೆ. ಅದನ್ನು ಇಲ್ಲಿ ಹೇಳಲಾಗಿದೆ.

### ಪತ್ರ ೬೦

### (ಶ್ರೀಮತಿ ಓಲೆ ಬುಲ್‌ಗೆ ಇಂಗ್ಲಿಷಿನಲ್ಲಿ ಬರೆದ ಪತ್ರ)

12,Gopal Ch.Niogi's Lane
Bagh Bazar, Calcatta.
೨೮.೭.೧೦

ತಾಯಿ,

ನೀನು ತುಂಬಾ ಅಸ್ವಸ್ಥಳು ಎಂದು ಕೇಳಿ ಬಹಳ ಚಿಂತೆಯಿಂದಿದ್ದೇನೆ! ಈಗ ನೀನು ಸ್ವಲ್ಪ ಚೆನ್ನಾಗಿರುವೆ ಎಂದು ನಿನ್ನ ಕನ್ಯೆ, ನಿವೇದಿತಾಳಿಂದ ಕೇಳಿದೆ. ನೀನು ಆದಷ್ಟು ಬೇಗ ರೋಗಮುಕ್ತಳಾಗಲು ಶ್ರೀ ಶ್ರೀ ಠಾಕೂರರಲ್ಲಿ ಪ್ರಾರ್ಥಿಸುತಿದ್ದೇನೆ. ನೀನು ಹುಷಾರಾದರೆ ನನಗೆ ತುಂಬಾ ಆನಂದವಾಗುವುದು.

ನಾನು ಈಗ ಇಲ್ಲಿಗೆ ಬಂದಿದ್ದೇನೆ ಮತ್ತು ಇಲ್ಲಿಯ ನನ್ನ ಮಕ್ಕಳೆಲ್ಲರೂ ಚೆನ್ನಾಗಿದ್ದಾರೆ, ಯೋಗಿನ್‌ಳನ್ನು ಹೊರತುಪಡಿಸಿ. ಅವಳಿಗೆ ಹುಷಾರಿಲ್ಲ , ಇದರಿಂದ ಸ್ವಲ್ಪ ಆತಂಕದಿಂದಿದ್ದೇನೆ, ದು:ಖದಿಂದಿದ್ದೇನೆ.

ನಿನಗಾಗಿ ಶ್ರೀ ರಾಮಕೃಷ್ಣರ ಚರಣಗಳಲ್ಲಿ ತುಳಸಿ ಮತ್ತು ಬಿಲ್ವಪತ್ರೆ ಅರ್ಪಿಸಿದ್ದೇನೆ. ತ್ರಿಸಂಧ್ಯೆಯಲ್ಲಿ ಅವರ ಮುಂದೆ ಕುಳಿತು ನಿನಗಾಗಿ ಪ್ರಾರ್ಥಿಸಿದ್ದೇನೆ. ಜಯಾ (ಮಿಸ್ ಮ್ಯಾಕ್ಲೋಡ್) ನಿನ್ನ ಬಳಿ ಇದ್ದಾಳೆಯೇ ಎಂದು ತಿಳಿಯುವ ಇಚ್ಛೆಯೂ ನನಗಿದೆ. ದಯವಿಟ್ಟು ಅವಳಿಗೆ ನನ್ನ ಆಂತರ್ಯದ ಆಶೀರ್ವಾದವನ್ನು ಕೊಡು. ಕ್ರಿಸ್ಟೀನ್‌ಳನ್ನು ಕಂಡರೆ ಅವಳಿಗೂ ತಿಳಿಸಲು ಮರೆಯಬೇಡ. ನಿನ್ನ ಈ ಅನಾರೋಗ್ಯದ ಸಮಯದಲ್ಲಿ ನಿನ್ನ ಮಗಳು (ಒಲಿಯಾ) ಬಳಿಯಲ್ಲಿಲ್ಲ , ಇದನ್ನು ಅರಿತು ತುಂಬಾ ದು:ಖವಾಯಿತು.

ಈಗ ಇದರ ಜೊತೆಯಲ್ಲಿ ಶ್ರೀ ಶ್ರೀ ಠಾಕೂರರ ಪೂಜೆಯ ಸಮಯದಲ್ಲಿ ನಿವೇದನೆ ಮಾಡಿರುವ ಗಂಧ, ಪುಷ್ಪ ನಿನಗೆ ಕಳುಹಿಸುತ್ತಿರುವೆ. ನನ್ನ ಆತ್ಮೀಯ ಸ್ನೇಹ ಮತ್ತು ಆಶೀರ್ವಾದಗಳನ್ನು ನೀನು ಅನುಭವಿಸುವೆ. ನಿನ್ನನ್ನು ಅತ್ಯಂತವಾಗಿ ಪ್ರೀತಿಸುತ್ತಿದ್ದೇನೆ ಮತ್ತು ಹೃದಯಪೂರ್ವಕವಾಗಿ ಆಶೀರ್ವದಿಸುತ್ತಿದ್ದೇನೆ. ನಾವು ನಿನ್ನಿಂದ ತುಂಬಾ ದೂರದಲ್ಲಿದ್ದೇವೆ. ಆದರೆ ನೀನು ಬಳಿಯಲ್ಲೇ ಇರುವೆ ಎಂದು ಯಾವಾಗಲೂ ನನಗೆ ಅನ್ನಿಸುತ್ತಿದೆ!

ನಿನ್ನ ತಾಯಿ (Mother)

Mrs Ole Bull
Studio House
168 Brattle St., Cambridge Mass
U.S.A.

ವಿವರಣೆ: ಮಿಸೆಸ್ ಓಲೆಬುಲ್ ಸ್ವಾಮಿ ವಿವೇಕಾನಂದರ ವಿದೇಶೀ ಶಿಷ್ಯೆ. ಅವಳು ಅತ್ಯಂತ ಶ್ರೀಮಂತೆಯೂ, ಗುಣವಂತೆಯೂ ಆಗಿದ್ದಳು. ಸ್ವಾಮೀಜಿ ಅವಳನ್ನು 'ಅಮ್ಮಾ' ಎಂದು ಕರೆಯುತ್ತಿದ್ದರು. ಬೇಲೂರು ಮಠದ ಸ್ಥಾಪನೆಗಾಗಿ ಅವಳು ಬಹುಪಾಲಿನ ಆರ್ಥಿಕ ದಾನ ಮಾಡಿದ್ದಳು. ಅತ್ಯಂತ ಲಜ್ಜಾ ಶೀಲೆಯಾಗಿದ್ದ ಶ್ರೀಮಾತೆಯವರು ಇವಳ ವಿನಂತಿಗೋಸ್ಕರವೇ ತಮ್ಮ ಫೋಟೋ ತೆಗೆಯಲು ಸಮ್ಮತಿಸಿದ್ದರು.

### ಪತ್ರ ೬೧

ಉದ್ಬೋಧನ – ಕಾರ್ಯಾಲಯ
೧೨, ೧೩ ನಂ., ಗೋಪಾಲಚಂದ್ರ ನಿಯೋಗಿಯ ಲೇನ್
ಬಾಗ್ ಬಜಾರ್ ಅಂಚೆ, ಕಲ್ಕತ್ತಾ
ತಾರೀಕು ೬, ಭಾದ್ರಪದ ೧೩೧೭, ೨೨.೮.೧೦

ನಿನಗೆ ಶುಭವಾಗಲಿ.

ಮಗೂ, ನಿನ್ನ ಪತ್ರ ಮತ್ತು ನಾರಾಯಣ್ ಅಯ್ಯಂಗಾರ್ ಕಳುಹಿಸಿರುವ ಬಟ್ಟೆ ಸರಿಯಾದ ಸಮಯಕ್ಕೆ ಸಿಕ್ಕಿತು. ನೀನು ಅಲ್ಲಿಗೆ ತಲುಪಿದ ಮೇಲೆ ಬಹುಮಟ್ಟಿಗೆ ಹುಷಾರಾಗಿರುವೆ ಎಂದು ಕೇಳಿ ಸಮಾಧಾನವಾಯಿತು. ನಿನಗೆ, ತುಳಸಿ, ಜಿತೇನ್ ಮೊದಲಾದವರಿಗೆ ನನ್ನ ಆಶೀರ್ವಾದಗಳು. ನನ್ನ ಆರೋಗ್ಯ ತುಸು ಚೆನ್ನಾಗಿದೆ. ನಾರಾಯಣ ಅಯ್ಯಂಗಾರ್‌ಗೆ ನನ್ನ ಆಶೀರ್ವಾದಗಳನ್ನು ತಿಳಿಸು.

ಇತಿ,
ನಿಮ್ಮೆಲ್ಲರ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Swami Ramakrishnananda*
*The Ramakrishna Mission*
*Bangalore*

# ಸರಿಯಾ ಬೀಬಿ ಮತ್ತು ಫತೇಮಾ ಬೀಬಿ

## ಅನುಷ್ಠಾನ ವೇದಾಂತ

ಮೂಲ : **'Swami Vivekananda: The Great Inspirer', ರಾಮಕೃಷ್ಣ ಶಾರದಾ ಮಿಷನ್ ಪ್ರಕಟಣೆ**
ಅನುವಾದ : **ಸ್ವರ್ಣಗೌರಿ**



ಸ್ವಾತಂತ್ರ್ಯ ಹೋರಾಟಗಾರ ಅಬ್ದುಲ್ ಗಫರ್ ಖಾನರ 'ಗಫರ್ ವೇನೇ' ಎಂಬ ಉಣ್ಣೆಯ ಕಾರ್ಖಾನೆ ಕ್ಯಾನೋರ್ ಹಳ್ಳಿಯಲ್ಲಿ ಸುಪ್ರಸಿದ್ಧವಾಗಿತ್ತು. ಕುಟುಂಬದ ಸದಸ್ಯರೆಲ್ಲರೂ ವ್ಯಾಪಾರಕ್ಕೆ ಒಂದಲ್ಲ ಒಂದು ರೀತಿ ಸಹಾಯ ನೀಡುತ್ತಿದ್ದರು. ಸ್ತ್ರೀಯರು ಉಣ್ಣೆ ನೇಯ್ದರೆ, ಪುರುಷರು ಅವನ್ನು ವಿವಿಧ ಶಾಖೆಗಳಿಗೆ ಒಯ್ಯುತ್ತಿದ್ದರು. ಈ ಕಾರ್ಖಾನೆಯು ಅನೇಕ ವಿಧವೆಯರಿಗೆ ಜೀವನಾಧಾರವಾಗಿತ್ತು. ದಿನೇ ದಿನೇ ಉಣ್ಣೆಯ ವ್ಯಾಪಾರವು ಲಾಹೋರ್, ದೆಹಲಿ, ಅಹಮದಾಬಾದ್, ಕ್ಯಾಲಿಕಟ್, ಮದರಾಸು ಕಲ್ಕತ್ತಾ ಹೀಗೆ ಪಸರಿಸುತ್ತಾ ವಿಸ್ತಾರಗೊಂಡಿತು.

ಒಮ್ಮೆ ಸ್ವಾಮಿ ವಿವೇಕಾನಂದರು ಇವರ ಮನೆಗೆ ಭೇಟಿ ನೀಡಿ ಕುಡಿಯಲು ನೀರು ಕೇಳಿದರು. ನೀರನ್ನು ಕುಡಿದ ನಂತರ, ''ನಿಮ್ಮ ಧರ್ಮವಾವುದು, ತಾಯಿ?'' ಎಂದು ಪ್ರಶ್ನಿಸಿದರು. ಸರಿಯಾ ಬೀಬಿ ಹೆಮ್ಮೆಯಿಂದ, ''ಭಗವಂತನ ಕೃಪೆಯಿಂದ ನಾನೊಬ್ಬ ಮುಸಲ್ಮಾನಳು'' ಎಂದು ಉತ್ತರಿಸಿದಳು. ಸ್ವಾಮೀಜಿ ಸಂತುಷ್ಟರಾದರು.

ವಿದೇಶದಿಂದ ಹಿಂತಿರುಗಿದ ನಂತರ ಸ್ವಾಮೀಜಿ ತಮ್ಮ ಪಾಶ್ಚಾತ್ಯ ಶಿಷ್ಯರೊಡಗೂಡಿ ಮತ್ತೊಮ್ಮೆ ಸರಿಯಾಳನ್ನು ಭೇಟಿಯಾದರು. ತನ್ನ ಸೊಸೆ, ಮೊಮ್ಮಕ್ಕಳಿಂದ ಸುತ್ತುವರಿದ ಆಕೆ ಉಣ್ಣೆ ನೇಯುವುದರಲ್ಲಿ ಮಗ್ನಳಾಗಿದ್ದಳು. ಆ ವೃದ್ಧಾಪ್ಯದಲ್ಲೂ 'ಸಲಾಂ' ಮೂಲಕ ಸ್ವಾಮೀಜಿ ಆಕೆಯನ್ನು ಆದರಿಸಿದರು. ಸರಿಯಾ ಬೀಬಿಯು ಅವರೆಲ್ಲರನ್ನೂ ಹಾರ್ದಿಕವಾಗಿ ಸ್ವಾಗತಿಸಿ ಸಿಹಿತಿಂಡಿ ಹಾಗೂ ಹಣ್ಣುಹಂಪಲವಿತ್ತು ಸತ್ಕರಿಸಿದಳು.

ಅವಳ ಹತ್ತು ವರ್ಷದ ಮೊಮ್ಮಗಳು ಫತೇಮಾ ಬೀಬಿ ಅತ್ಯಂತ ಕುತೂಹಲದಿಂದ ಸ್ವಾಮೀಜಿಯವರನ್ನು ಗಮನಿಸುತ್ತಿದ್ದಳು. ಪಾಶ್ಚಾತ್ಯ ಶಿಷ್ಯರು ಅವಳಿಗೆ ಆಕರ್ಷಕವಾದ ಗೊಂಬೆಯೊಂದನ್ನು ಬಳುವಳಿಯಾಗಿ ನೀಡಿದರು. ಅದು ಅವಳಿಗೆ ಅದೆಷ್ಟು ಮೆಚ್ಚುಗೆಯಾಯಿತೆಂದರೆ ಅದನ್ನು ಸದಾ ತನ್ನೊಡನೆ ಇರಿಸಿಕೊಳ್ಳುತ್ತಿದ್ದಳು. ನಂತರದ ದಿನಗಳಲ್ಲಿ ಈ ಘಟನೆಯನ್ನು ಕುರಿತು ಫತೇಮಾ ಹೀಗೆಂದು ಹೇಳುತ್ತಿದ್ದಳು: ''ಸ್ವಾಮೀಜಿಯವರ ರೂಪು ಅತ್ಯಂತ ಮನೋಹರವಾಗಿತ್ತು ಹಾಗೂ ಶುದ್ಧ ಹಿಂದೀ ಭಾಷೆಯಲ್ಲಿ ಅವರು ಮಾತನಾಡುತ್ತಿದ್ದರು. ತಮ್ಮ ಸುಮಧುರ ಶಾರೀರದಲ್ಲಿ ಹಿಂದಿ ಭಜನೆ ಹಾಡುತ್ತಿದ್ದರು.''

ಸರಿಯಾ ಬೀಬಿ ಅಬ್ದುಲ್ ಗಫಾರ್ ಖಾನ್‌ರಿಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಪ್ರೋತ್ಸಾಹಿಸುತ್ತಿದ್ದಳು. ತಂದೆ ಸುಪ್ರಸಿದ್ಧ ಹಕೀಂ (ವೈದ್ಯ)ರಾಗಿದ್ದ ಕಾರಣ ಆಕೆಗೆ ಅನೇಕ ಔಷಧೀಯ ಗಿಡಮೂಲಿಕೆಗಳನ್ನು ಹೇಗೆ ಉಪಯೋಗಿಸಬೇಕೆಂದು ತಿಳಿದಿತ್ತು. ಅಲ್ಲದೆ ಗರ್ಭಿಣಿಯರ ಉಪಚಾರ ಮಾಡುವುದರಲ್ಲೂ ಅದೆಷ್ಟು ನಿಷ್ಣಾತಳಾಗಿದ್ದಳೆಂದರೆ ಮೊಮ್ಮಗಳಾದ ಫತೇಮಾಳಿಗೂ ತರಬೇತಿ ನೀಡಿದ್ದಳು. ಅನೇಕರಿಗೆ ಹೆರಿಗೆ ನೋವಿನಿಂದ ಬಿಡುಗಡೆ ಮಾಡುವುದರ ಮೂಲಕ ಆಕೆ ಎಲ್ಲರ ಪ್ರೀತ್ಯಾದರಗಳನ್ನು ಗಳಿಸಿದ್ದಳು. ''ಐದು ತಲೆಮಾರುಗಳಾದರೂ ಸ್ವಾಮಿ ವಿವೇಕಾನಂದರ ಸ್ಮೃತಿಯು ನಮ್ಮ ಮನೆಯಲ್ಲಿ ಹಚ್ಚಹಸಿರಾಗಿದೆ, ಜೀವಂತವಾಗಿದೆ'' ಎನ್ನುತ್ತಾರೆ, ಅವರ ಕುಟುಂಬದ ಸದಸ್ಯರು!

ವಿಶ್ವಭ್ರಾತೃತ್ವದ ದ್ಯೋತಕರಾಗಿದ್ದ ಸ್ವಾಮೀಜಿ ಹಿಂದು, ಮುಸಲ್ಮಾನರೆನ್ನದೆ ಎಲ್ಲರ ಮೇಲೂ ತಮ್ಮ ವ್ಯಕ್ತಿತ್ವದ ಪ್ರಭಾವ ಬೀರಿದರು. ''ಕೇವಲ ಒಬ್ಬ ಮನುಷ್ಯನನ್ನು ತರಬೇತು ಮಾಡಲು ನಾನು ಸಾವಿರಾರು ಜನ್ಮಗಳನ್ನು ಎತ್ತಿಬರಲು ಸಿದ್ಧನಿದ್ದೇನೆ'' ಇದು ಸ್ವಾಮೀಜಿಯವರ ನುಡಿ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೮, ಪುಟ ೧೭೯)*



# ಶ್ರೀ ವಲ್ಲಭಾಚಾರ್ಯರು

ಆಂಗ್ಲಮೂಲ: ಸ್ವಾಮಿ ತಪಸ್ಯಾನಂದ

ಕನ್ನಡಕ್ಕೆ: ಸ್ವಾಮಿ ವೀರೇಶಾನಂದ

## ಭಾಗ ೨



ಇದೇ ವರ್ಷದಲ್ಲಿ ಅಥವಾ ಇದಕ್ಕೆ ಸರಿಸುಮಾರಿನಲ್ಲಿ ವಲ್ಲಭರ ಜೀವನದಲ್ಲಿ ಇನ್ನೊಂದು ಮಹತ್ವದ ಘಟನೆ ನಡೆಯಿತು. ಅವರಿಗೆ ಗೋವರ್ಧನನಾಥಜೀ ಎಂದು ಕರೆಯಲಾಗುವ ಶ್ರೀಕೃಷ್ಣನ ಸುಂದರ ಮೂರ್ತಿಯು ಲಭಿಸಿತು. ಈ ಘಟನೆಯನ್ನು ವಲ್ಲಭ ಸಂಪ್ರದಾಯದಲ್ಲಿ ಪ್ರಾಕಟ್ಯ ಎಂದು ಕರೆಯುತ್ತಾರೆ. ಬಾಲ ಕೃಷ್ಣನು ಗೋವರ್ಧನ ಪರ್ವತವನ್ನು ಎತ್ತುವ ಭಂಗಿಯ ಮೂರ್ತಿಯಿದು. ವ್ರಜಭೂಮಿಯ ಗುಡ್ಡದ ಕಲ್ಲೊಂದರಿಂದ ಇದು ಮೂಡಿಬಂತು ಎಂದು ಹೇಳುತ್ತಾರೆ. ಈ ಪ್ರತಿಮೆ ಪೂರ್ಣವಾಗಿ ಒಡಮೂಡಿದ ನಂತರ, ಅದಕ್ಕೆ ಮಾಧವೇಂದ್ರ ಸ್ವಾಮಿಗಳು ಎಂಬ ಮಹಾತ್ಮರು ನೈವೇದ್ಯಾದಿಗಳನ್ನು ಸಮರ್ಪಿಸಿದರಂತೆ. ಆದರೆ ವಲ್ಲಭರನ್ನು ಬಿಟ್ಟು ಬೇರೆ ಯಾರ ಕೈಯಿಂದಲೂ ಆಹಾರವನ್ನು ಸ್ವೀಕರಿಸುವುದಿಲ್ಲವೆಂದು ಆ ಮೂರ್ತಿಯು ನಿರಾಕರಿಸಿಬಿಟ್ಟಿತಂತೆ. ವಲ್ಲಭರು ಪೂಜಾದಿಗಳನ್ನು ಭಗವಂತನಿಗೆ ಸಮರ್ಪಿಸಿದರು. ಈ ವಿಗ್ರಹದ ಸುತ್ತಲೂ ಒಂದು ಸಣ್ಣ ಮಂದಿರವನ್ನು ಕಟ್ಟಿದರು. ಕೆಲವು ಕಾಲದ ನಂತರ, ಪೂರ್ಣಮಾಲ್ ಎಂಬ ವರ್ತಕನು ಭಗವದನುದೇಶದಂತೆ ಬೃಹತ್ ದೇಗುಲವನ್ನು ಈ ಸ್ಥಳದಲ್ಲಿ ಕಟ್ಟಿಸಿದನು. ಇದಕ್ಕೆ ಹಲವಾರು ವರ್ಷಗಳೇ ಹಿಡಿಯಿತು ಎಂದು ಹೇಳುತ್ತಾರೆ. ಅಲ್ಲದೆ ಅವನು ಪ್ರತಿಮೆಯ ಪೂಜೆಗಾಗಿ ಇಬ್ಬರು ಪುರೋಹಿತರನ್ನು ಕೂಡ ನಿಯಮಿಸಿದನು. ವಲ್ಲಭರ ಕಾಲದ ನಂತರ, ಅದನ್ನು ಗೋಕುಲದಿಂದ ಉದಯಪುರದ ಬಳಿಯಲ್ಲಿರುವ ನಾಥದ್ವಾರ ಎಂಬಲ್ಲಿಗೆ ಸ್ಥಳಾಂತರಿಸಲಾಯಿತು. ವಲ್ಲಭರ ಅನುಯಾಯಿಗಳಿಗೆ ಈ ಸ್ಥಳವು ಅತ್ಯಂತ ಪರಮ ಪವಿತ್ರ ಯಾತ್ರಾಸ್ಥಳವಾಗಿದೆ. ನಾಥದ್ವಾರದಲ್ಲಿ ಈಗಲೂ ಪೂಜಿಸಲ್ಪಡುತ್ತಿರುವ ಮೂರ್ತಿಯು ಭಗವಂತನ ಸ್ವರೂಪ ಅಥವಾ ಜೀವಂತ ಮೂರ್ತಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠವಾದುದು ಎಂದು ಪರಿಗಣಿತವಾಗಿದೆ.

### ಮೂರನೆಯ ತೀರ್ಥಯಾತ್ರೆ

ವಲ್ಲಭರ ಎರಡನೆಯ ತೀರ್ಥಯಾತ್ರೆಯು ಅವರ ವಿವಾಹದೊಂದಿಗೆ ಸಂಪನ್ನಗೊಂಡಿತು. ತದನಂತರ ಅವರು ತಮ್ಮ ತಾಯಿ ಮತ್ತು ಕುಟುಂಬದವರೊಡನೆ ವಾರಾಣಸಿಯಲ್ಲಿ ಒಂದು ವರ್ಷ ಕಾಲ ನಿವಾಸ ಮಾಡಿದರು. ಇದಾದ ಮೇಲೆ ಅವರು ತಮ್ಮ ಮೂರನೆಯ ತೀರ್ಥಯಾತ್ರೆಯನ್ನು ಆರಂಭಿಸಿದರು. ನಾಲ್ಕು ವರ್ಷಗಳ ಕಾಲ ಈ ಯಾತ್ರೆಯು ನಡೆಯಿತು. ಈ ಅವಧಿಯಲ್ಲಿ ಅವರು ತಾವು ಈಗಾಗಲೇ ಭೇಟಿ ನೀಡಿದ್ದ ಹಲವಾರು ಕ್ಷೇತ್ರಗಳನ್ನು ಮತ್ತೆ ದರ್ಶಿಸಿದರು. ಆ ಕ್ಷೇತ್ರಗಳು ಮಧ್ಯ ಭಾರತ, ಪಶ್ಚಿಮ ಭಾರತ ಮತ್ತು ಪೂರ್ವ ಭಾರತಗಳಲ್ಲಿ ಇದ್ದವು. ಈಗಿನ ತೀರ್ಥಯಾತ್ರೆಯು ಅವರ ಪಾಲಿಗೆ ಕಾರ್ಯನಿಮಿತ್ತವಾದ ಪ್ರಯಾಣದಂತೆ ಇತ್ತೇ ಹೊರತು, ಕೇವಲ ತೀರ್ಥಯಾತ್ರೆಯಾಗಿರಲಿಲ್ಲ. ಹೋದೆಡೆಯೆಲ್ಲ ಅವರು ಇತರೆ ತಾತ್ತ್ವಿಕ ಶಾಖೆಗಳ ಪಂಡಿತರೊಂದಿಗೆ ತತ್ತ್ವಜಿಜ್ಞಾಸೆ ಮತ್ತು ವಾದಗಳಲ್ಲಿ ನಿರತರಾಗಿರುತ್ತಿದ್ದರು. ಆ ಮೂಲಕ ತಮ್ಮ ಪುಷ್ಟಿಮಾರ್ಗದ ಶ್ರೇಷ್ಠತೆಯನ್ನು ಸಂಸ್ಥಾಪಿಸಿದರು. ಭಗವಂತನೇ ಈ ಮಾರ್ಗವನ್ನು ಅವರಿಗೆ ತೋರಿಸಿಕೊಟ್ಟನಲ್ಲವೆ? ಪಂಡಿತರೊಡನೆ ತಾವು ನಡೆಸಿದ ವಾದಗಳಲ್ಲಿ ಅವರು ಯಾವಾಗಲೂ ರಚನಾತ್ಮಕ ನಿಲುವನ್ನು ತಳೆದಿರುತ್ತಿದ್ದರು. ಯಾವತ್ತೂ ವಾದವು ದ್ವೇಷಪೂರಿತವಾಗುವುದಕ್ಕೆ ಅವಕಾಶ ಮಾಡಿಕೊಡಲಿಲ್ಲ. ಇದಲ್ಲದೆ ವಲ್ಲಭರು ಬ್ರಹ್ಮಸಂಬಂಧ ಮಂತ್ರವನ್ನು ಬಹುಸಂಖ್ಯೆಯ ಭಕ್ತರಿಗೆ ಪ್ರದಾನ ಮಾಡಿ ದೀಕ್ಷೆಯನ್ನು ನೀಡಿದರು. ಇದರಿಂದಾಗಿ ಆ ಅನುಯಾಯಿಗಳ ಜೀವನದಲ್ಲಿ ಹೊಸ ಪರ್ವವೇ ಆರಂಭವಾಗಿತ್ತು. ದೀಕ್ಷೆಯನ್ನು ಪಡೆದುಕೊಂಡವರಿಗೆ ಇದು ಪಾಪದಿಂದ ಉದ್ಧರಿಸುವ ಕ್ರಿಯೆಯಾಗಿತ್ತು. ಹಾಗೆಯೇ ಅದು ಭಗವಂತನಲ್ಲಿ ಸಂಪೂರ್ಣವಾಗಿ ಶರಣಾಗುವುದಕ್ಕೆ ಸಹಾಯ ಮಾಡುವ ಸಾಧನವೂ ಆಗಿತ್ತು. ವಲ್ಲಭರು

ಜನಸಾಮಾನ್ಯರಿಗೆ ಭಾಗವತವನ್ನು ವಿವರಿಸುವ ಮೂಲಕ ತಮ್ಮ ಪಂಥದ ಉಪದೇಶಗಳನ್ನು ನೀಡುತ್ತಿದ್ದರು. ಎಲ್ಲಿ ಹೋದರೂ ಅವರು ಭಾಗವತ ಸಪ್ತಾಹವನ್ನು ನಡೆಸುತ್ತಿದ್ದರು. ಆ ಸಮಯದಲ್ಲಿ ಏಳುದಿನಗಳ ಕಾಲ ಭಾಗವತ ಪಾರಾಯಣ ಮತ್ತು ವ್ಯಾಖ್ಯಾನವನ್ನು ಮಾಡುತ್ತಿದ್ದರು.

ಅವರು ಪ್ರಯಾಣ ಮಾಡಿದ ಪ್ರದೇಶಗಳಲ್ಲೆಲ್ಲ ಗುಜರಾತ್ ರಾಜ್ಯದಲ್ಲಿ ಅವರಿಗೆ ಅಭೂತಪೂರ್ವ ಸ್ಪಂದನ ಲಭಿಸಿತು. ಹಾಗೆ ನೋಡಿದರೆ ಗುಜರಾತ್ ರಾಜ್ಯವು ವಲ್ಲಭರು ಬೋಧಿಸಿದ ಈ ಬಗೆಯ ಸಂದೇಶವನ್ನು ಸ್ವೀಕರಿಸಲು ಸನ್ನದ್ಧವಾಗಿತ್ತು ಎನ್ನಬೇಕು. ಏಕೆಂದರೆ, ಇದಕ್ಕೆ ಸ್ವಲ್ಪಕಾಲ ಮುಂಚೆ ನರಸಿಂಹ ಮೆಹ್ತಾ (ಕ್ರಿ.ಶ. ೧೪೧೪-೧೪೮೧) ಎಂಬ ಮಹಾನ್ ಭಕ್ತರು ಮತ್ತು ಭಕ್ತಿಗೀತೆಗಳ ರಚನಕಾರರು ಕಾವ್ಯಮಯವಾದ ಮತ್ತು ಅಂತರ್ದೃಷ್ಟಿಯ ಭಾವವುಳ್ಳ ತಮ್ಮ ಸಂಗೀತ ರಚನೆಗಳಿಂದ ಅಖಂಡ ಗುಜರಾತಿನ ಜನರನ್ನು ಮುಗ್ಧಗೊಳಿಸಿದ್ದರು. ಈ ಭಕ್ತಿರಚನೆಗಳು ಶೃಂಗಾರ ಭಕ್ತಿ ಎಂಬ ಸಾಹಿತ್ಯಪ್ರಕಾರಕ್ಕೆ ಸೇರಿದವು. ಈ ರಚನೆಗಳು ಮುಖ್ಯವಾಗಿ ರಾಧೆಯು ಶ್ರೀಕೃಷ್ಣನ ಮೇಲೆ ಇಟ್ಟುಕೊಂಡಿದ್ದ ಪರಮಪ್ರೇಮವನ್ನು ಅಮೋಘರೂಪದಲ್ಲಿ ಬಿಂಬಿಸುತ್ತವೆ. ಅನಂತರದ ತಮ್ಮ ಪ್ರಬುದ್ಧ ದಿನಗಳಲ್ಲಿ ನರಸಿಂಹ ಮೆಹ್ತಾ ಭಗವದ್ದರ್ಶನದ ಇನ್ನೂ ಉತ್ತಮ ಹಂತಗಳನ್ನು ಕಂಡುಕೊಳ್ಳುತ್ತಾರೆ; ಭಗವಂತನು ಸರ್ವವ್ಯಾಪಕನು ಎಂಬ ಅನುಭೂತಿಯನ್ನು ಪಡೆದುಕೊಳ್ಳುತ್ತಾರೆ; ಭಗವಂತನ ಸರ್ವಾತ್ಮಭಾವದ ಬಗ್ಗೆ ತಮ್ಮ ಅನಂತರದ ಗೀತೆಗಳಲ್ಲಿ ವಿಶೇಷವಾಗಿ ಪ್ರಸ್ತಾಪಿಸುತ್ತಾರೆ. ಕೃಷ್ಣನ ಮೇಲಿನ ನಿಷ್ಠಭಕ್ತಿ ಮತ್ತು ಬ್ರಹ್ಮಸಂಬಂಧವೆಂಬ ಸಾಧನೆಯ ಉಪದೇಶ - ಇವುಗಳಿಂದ ಕೂಡಿದ ಸಿದ್ಧಾಂತ ಮಾತ್ರವೇ, ನರಸಿಂಹ ಮೆಹ್ತಾ ಈಗಾಗಲೇ ಗುಜರಾತಿನಲ್ಲಿ ಹರಡಿದ್ದ ಭಕ್ತಿಸುಧೆಗೆ ಮತೀಯವಾಗಿ ಪೂರಕವಾಗಿರುತ್ತಿತ್ತು. ಅಂಥ ತತ್ತ್ವವನ್ನು ವಲ್ಲಭರ ಪುಷ್ಟಿಮಾರ್ಗವು ಒದಗಿಸಿಕೊಟ್ಟಿತು. ಇದಲ್ಲದೆ ವಲ್ಲಭರ ತತ್ತ್ವವು ಹರಡುವುದಕ್ಕೆ ಅನುಕೂಲ ಮಾಡಿಕೊಟ್ಟ ಇನ್ನೊಂದು ಪ್ರಭಾವವು ಪಕ್ಕದ ರಾಜಸ್ಥಾನದಲ್ಲಿ ಮುಂಬರುವ ದಿನಗಳಲ್ಲಿ ಮೂಡಿಬಂತು. ಆಗ ರಾಜಸ್ಥಾನದ ವೀರಯೋಧರು ಮುಸ್ಲಿಮ್ ಆಕ್ರಮಣಕಾರರ ವಿರುದ್ಧ ಹೋರಾಡುತ್ತಿದ್ದರು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಮೇವಾರದ ರಾಜಕುಟುಂಬಕ್ಕೆ ಸೇರಿದ ಮೀರಾಬಾಯಿಯು ರಾಜಸ್ಥಾನದ ಯೋಧಜನರ ನೊಂದ ಹೃದಯಕ್ಕೆ ಮನದುಂಬುವ ತನ್ನ ಭಕ್ತಿಗೀತೆಗಳ ಮೂಲಕ ಸಾಂತ್ವನವನ್ನು ನೀಡಿದಳು. ಕಾಲಕ್ರಮೇಣ ಅವು ಇಡೀ ಭಾರತದಾದ್ಯಂತ ಪ್ರಸಿದ್ಧಿಯನ್ನು ಪಡೆದವು. ವಲ್ಲಭರ ಪುತ್ರರೂ ಹಾಗೆಯೇ ಉತ್ತರಾಧಿಕಾರಿಯೂ ಆಗಿದ್ದ ವಿಠ್ಠಲನಾಥರ ಕಾಲದಲ್ಲಿ ಮೀರಾಬಾಯಿ ಜೀವಿಸಿದ್ದಳು. ಇದೇ ಕಾಲದಲ್ಲಿಯೇ ವಲ್ಲಭರ ಭಾಗವತ ಧರ್ಮವು ಆ ಪ್ರದೇಶದಲ್ಲಿಯೂ ಹರಡಿ ಪ್ರಖ್ಯಾತಿಯನ್ನು ಪಡೆದುಕೊಂಡಿತು.

ವಲ್ಲಭರ ಅವಸಾನವಾದ ಸ್ವಲ್ಪಕಾಲದಲ್ಲಿಯೇ, ಅವರ ಮಗ ವಿಠ್ಠಲನಾಥರು ಆ ಪಂಥದ ಮುಖ್ಯಸ್ಥರಾಗಿದ್ದಾಗ, ಗೋಕುಲದ ಗೋವರ್ಧನನಾಥಜೀ ಮಂದಿರವು ಮುಸ್ಲಿಮರ ದಾಳಿಗೆ ಒಳಪಡುವ ವದಂತಿ ದಟ್ಟವಾಗಿ ಹರಡಿತು. ಆ ಸಂದರ್ಭದಲ್ಲಿಯೇ ಮಂದಿರದ ಪವಿತ್ರ ವಿಗ್ರಹವನ್ನು ರಾಜಸ್ಥಾನದ ಉದಯಪುರಕ್ಕೆ ಹತ್ತಿರದಲ್ಲಿರುವ ನಾಥದ್ವಾರಕ್ಕೆ ಸ್ಥಳಾಂತರಿಸಲಾಯಿತು ಎನ್ನುವುದು ಗಮನಾರ್ಹವಾದ ಸಂಗತಿ. ಈ ವಿಗ್ರಹವನ್ನು ಇತ್ತೀಚಿನ ಕಾಲದಲ್ಲಿ **'ಶ್ರೀನಾಥಜೀ'** ಎಂದು ಪ್ರೀತಿಯಿಂದ ಕರೆದು ಪೂಜಿಸಲಾಗುತ್ತದೆ. ಭಗವಂತನ ಅತ್ಯಂತ ಶ್ರೇಷ್ಠವಾದ ಸ್ವರೂಪ (ಜೀವಂತ ರೂಪ) ಎಂದು ವಲ್ಲಭರ ಸಾವಿರಾರು ಅನುಯಾಯಿಗಳ ಹೃದಯಮಂದಿರಗಳಲ್ಲಿ ಈ ವಿಗ್ರಹವು ಪವಿತ್ರಸ್ಥಾನವನ್ನು ಪಡೆದಿದೆ. ಹಾಗೆಯೇ ಈ ಮೂರ್ತಿಗೆ ವೈಭವಯುತವಾಗಿ ಅಲಂಕಾರ ಮಾಡಲಾಗುತ್ತದೆ; ಕಲಾತ್ಮಕವಾಗಿ ವಿಗ್ರಹವನ್ನು ಅಂದಗೊಳಿಸಲಾಗುತ್ತದೆ. ಇವೆಲ್ಲವೂ ಭಕ್ತರು ತಮ್ಮ ಭಕ್ತಿಗೌರವಗಳನ್ನು ಭಗವಂತನಿಗೆ ಅರ್ಪಿಸುವ ಅಪೂರ್ವ ವಿಧಾನವಾಗಿದೆ. ಇದಲ್ಲದೆ ನೂರಾರು ಬಗೆಯ ರುಚಿರುಚಿಯಾದ ಸ್ವಾದಿಷ್ಟ ಖಾದ್ಯಗಳನ್ನು ಕೂಡ ಈ ಮೂರ್ತಿಗೆ ಭಕ್ತಿಭಾವದಿಂದ ಸಮರ್ಪಿಸಲಾಗುತ್ತದೆ. ಪಾಕಕಲೆಯ ಈ ಪರಿಣತಿಯನ್ನು ಭಗವಂತನ ಸೇವೆಯಲ್ಲಿ ಭಕ್ತರು ಹೀಗೆ ತೊಡಗಿಸುತ್ತಾರೆ. ವೈಷ್ಣವ ಪಂಗಡದ ಮಂದಿರಗಳನ್ನು ಹವೇಲಿಗಳು ಎಂದು ಕರೆಯುತ್ತಾರೆ. ವಲ್ಲಭರ ಪಂಥದಲ್ಲಿ ಈ ಪರಿಕಲ್ಪನೆ ಹಾಸುಹೊಕ್ಕಾಗಿದೆ. ಹವೇಲಿ ಎಂದರೆ ಭಗವಂತನ ಮನೆ ಎಂದರ್ಥ. ಇದನ್ನು ವಲ್ಲಭರ ಅನುಯಾಯಿಗಳು ಅಕ್ಷರಶಃ ನಂಬುತ್ತಾರೆ ಮತ್ತು ದೇವಮಂದಿರಗಳಲ್ಲಿ ಭಗವಂತನ ಜೀವಂತ ಸಾನ್ನಿಧ್ಯವಿದೆ ಎಂದು ಭಾವಿಸುತ್ತಾರೆ. ಹೀಗಾಗಿ ಇತರ ಹಿಂದೂ ಪಂಗಡಗಳಂತೆ ಇಲ್ಲಿ ಭಗವಂತನ ಪೂಜೆಯು ಕೇವಲ ಆಚರಣೆ ಮಾತ್ರವಾಗಿ ಉಳಿದಿಲ್ಲ. ಭಗವಂತನ ಮೂರ್ತಿಯನ್ನು ಒಂದು ಜೀವಂತ ಮೂರ್ತಿಯಂತೆ ವಲ್ಲಭರ ಪಂಥದಲ್ಲಿ ಪರಿಗಣಿಸುತ್ತಾರೆ. ಮೂರ್ತಿಗೆ ವೈಭವಯುತವಾಗಿ ಅಲಂಕಾರ ಮಾಡುತ್ತಾರೆ, ನೂರಾರು ವಿಧದ ಆಹಾರ ಪದಾರ್ಥಗಳನ್ನು ನಿವೇದಿಸುತ್ತಾರೆ. ಮತ್ತು ಭಗವಂತನಿಗೆ ಎಲ್ಲ ವಿಧದ ಸೇವೆಗಳನ್ನು ಸಲ್ಲಿಸುತ್ತಾರೆ. ಹೀಗೆ ದೇವಮಂದಿರವನ್ನು ಭಗವಂತನೆಂಬ ದೊರೆಯ ಅರಮನೆಯಂತೆಯೇ ಅಕ್ಷರಶಃ ಭಾವಿಸಿ, ಭಕ್ತರು ಅವನನ್ನು ಆನಂದದಿಂದ ಆರಾಧಿಸುತ್ತಾರೆ.

### ಶ್ರೀಚೈತನ್ಯರ ಜೊತೆಗೆ ಭೇಟಿ

ವಲ್ಲಭರ ಜೀವನದಲ್ಲಿ ನಡೆದ ಇನ್ನೊಂದು ಮಹತ್ವದ ಘಟನೆಯೆಂದರೆ ತಮ್ಮ ತೀರ್ಥಯಾತ್ರೆಯ ಸಮಯದಲ್ಲಿ ಮತ್ತು ತದನಂತರವೂ ಕೂಡ ಶ್ರೀಚೈತನ್ಯರನ್ನು ಭೇಟಿಮಾಡಿದ್ದು. ಶ್ರೀಚೈತನ್ಯರು ಬಂಗಾಳದ ಪ್ರಸಿದ್ಧ ವೈಷ್ಣವ ಆಚಾರ್ಯರು. ಇವರಿಬ್ಬರ ನಡುವೆ ನಡೆದ ಸಂದರ್ಶನಗಳ ದಿನಾಂಕಗಳ ಬಗ್ಗೆ ಖಚಿತವಾಗಿ ತಿಳಿದುಬಂದಿಲ್ಲ. ಆದರೂ ಈ ಬಗ್ಗೆ ಹಲವಾರು ಘಟನೆ

ಗಳನ್ನು ನಾವು ವಲ್ಲಭರ ಜೀವನಚರಿತ್ರೆಯಲ್ಲಿ ಓದುತ್ತೇವೆ. ಆದರೆ ಆ ಘಟನೆಗಳ ವಿವರಗಳಲ್ಲಿ ಮತೀಯ ಒಲವಿನ ಭಾವನೆಗಳು ಸೇರಿಕೊಂಡಿರುವುದನ್ನು ಗಮನಿಸಬಹುದು. ಈ ಘಟನೆಗಳ ವಿವರಗಳನ್ನು ವಲ್ಲಭ ಹಾಗೂ ಚೈತನ್ಯ – ಇವರಿಬ್ಬರ ಪಂಥಗಳ ದಾಖಲೆಗಳಲ್ಲಿಯೂ ನಾವು ಕಾಣಬಹುದು. ಮೊದಲ ಭೇಟಿ ನಡೆದದ್ದು ಗಂಗೆಯು ಸಮುದ್ರವನ್ನು ಸೇರುವ ಪುಣ್ಯಕ್ಷೇತ್ರವಾದ ಗಂಗಾಸಾಗರದಲ್ಲಿ, ಇಬ್ಬರು ಮಹಾತ್ಮರೂ ಅಲ್ಲಿಗೆ ತೀರ್ಥಯಾತ್ರೆಯ ನಿಮಿತ್ತ ಹೋಗಿದ್ದರು. ಬೃಂದಾವನ ಮತ್ತು ಗೋಕುಲದಲ್ಲಿ ಇನ್ನೆರಡು ಬಾರಿ ಅವರು ಪರಸ್ಪರ ಭೇಟಿಮಾಡಿದರು. ಇವೆರಡೂ ಹತ್ತಿರದ ಸ್ಥಳಗಳಾಗಿದ್ದು, ಶ್ರೀಕೃಷ್ಣನ ಲೀಲಾಕ್ಷೇತ್ರಗಳಾಗಿವೆ. ಹೀಗಾಗಿ ಉಭಯ ಆಚಾರ್ಯರಿಗೂ ಪವಿತ್ರತಾಣಗಳಾಗಿವೆ. ಇವರಿಬ್ಬರ ನಡುವಿನ ಮೂಲಭೂತ ಕೊಂಡಿಯೆಂದರೆ, ಭಾಗವತ ಮಹಾಪುರಾಣವು ಪ್ರಮುಖವಾದ ಶಾಸ್ತ್ರಗ್ರಂಥ ಎಂಬುದನ್ನು ಇಬ್ಬರೂ ಒಪ್ಪಿಕೊಂಡಿರುವುದು ಮತ್ತು ಶ್ರೀಕೃಷ್ಣನು ಪೂರ್ಣಾವತಾರ ಎಂಬ ಇವರಿಬ್ಬರ ದೃಢವಾದ ನಂಬಿಕೆ. ಹೀಗಿದ್ದರೂ ಭಾವನಾತ್ಮಕವಾಗಿ ಇವರಿಬ್ಬರ ಪಂಥಗಳಲ್ಲಿ ಬಹಳ ವ್ಯತ್ಯಾಸವನ್ನು ಕಾಣಬಹುದು. ವಲ್ಲಭರದು ಬೌದ್ಧಿಕ ಮನೋಭಾವ. ಅವರು ಪ್ರತಿಪಾದಿಸುವ ಭಕ್ತಿತತ್ತ್ವವು ಗಾಢವಾದುದು ಮತ್ತು ಅತ್ಯುನ್ನತವಾದುದು. ಆದರೂ ಈ ಬಗೆಯ ಭಕ್ತಿಯಲ್ಲಿ ಭಾವೋನ್ಮಾದ ಕಾಣಬರುವುದಿಲ್ಲ. ಇದಕ್ಕೆ ವಿರುದ್ಧವಾಗಿ ಶ್ರೀಚೈತನ್ಯರು ಮಾನವತೆಯ ಅಂಗಣದಲ್ಲಿ ಭಕ್ತಿಯ ಮಹಾಪೂರವನ್ನು ಹರಿಸಿದ್ದು , ಭಾವೋನ್ಮತ್ತತೆಯೇ ಪ್ರಧಾನವಾದ ಸಂಕೀರ್ತನೆ ಮತ್ತು ಹರ್ಷೋಲ್ಲಾಸಯುಕ್ತ ನರ್ತನಗಳ ಮೂಲಕ. ವಲ್ಲಭರು ತಮ್ಮ ಅನುಯಾಯಿಗಳಿಗೆ ಭಾಗವತ ಪುರಾಣದ ವ್ಯಾಖ್ಯಾನದ ಮೂಲಕ ಭಕ್ತಿಸುಧೆಯನ್ನು ಹರಿಸಿದರು. ಹಾಗೆಯೇ ಭಗವಂತನ ಪ್ರತಿರೂಪಗಳೆಂದೇ ಭಾವಿಸುತ್ತ ಮಾಡುವ ಮೂರ್ತಿಗಳ ಕೈಂಕರ್ಯವೇ ಭಕ್ತಿಸಾಧನೆ ಎಂದು ಪ್ರತಿಪಾದಿಸಿದರು. ಶ್ರೀಚೈತನ್ಯರು ಮಧುರ ಭಾವ ಅಥವಾ ಶೃಂಗಾರ ಭಕ್ತಿಯನ್ನು ತಮ್ಮ ಎಲ್ಲ ಅನುಯಾಯಿಗಳಿಗೆ ಬೋಧಿಸಿದರು. ರಾಧಾಕೃಷ್ಣರ ಅನ್ಯೋನ್ಯ ಸಂಬಂಧವನ್ನು ಆಧರಿಸಿದ ಪರಮಭಾವ ಇದು. ಆದರೆ ಈ ಮಧುರಭಾವವನ್ನು ವಲ್ಲಭರು ಕೇವಲ ಕೆಲವು ಉತ್ತಮಾಧಿಕಾರಿಗಳಿಗೆ ಮಾತ್ರವೇ ಬೋಧಿಸಿದರು. ಅವರು ಎಲ್ಲರಿಗೂ ಸಾಮಾನ್ಯವಾಗಿ ಉಪದೇಶಿಸಿದ ಸಾಧನೆಯೆಂದರೆ ಬಾಲಕೃಷ್ಣನನ್ನು ಪ್ರೀತಿಯಿಂದ ಆರಾಧಿಸುವುದು. ಇದಲ್ಲದೆ ಶ್ರೀಚೈತನ್ಯರು ಸಂನ್ಯಾಸಿಗಳಾಗಿದ್ದರು. ತಮ್ಮ ಯೌವನದ ದಿನಗಳಲ್ಲಿ ಆಗಿನ ಕಾಲದ ಅತ್ಯಂತ ಶ್ರೇಷ್ಠ ನ್ಯಾಯ ವಿದ್ವಾಂಸರಾಗಿದ್ದ ಅವರು ತಮ್ಮ ವಿದ್ವತ್ತಿನ ಜೀವನಶೈಲಿಯನ್ನು ಭಕ್ತಿಸಾಧನೆಗಾಗಿ ಸಂಪೂರ್ಣವಾಗಿ ತ್ಯಾಗಮಾಡಿದರು. ಇದಕ್ಕೆ ವಿರುದ್ಧವಾಗಿ, ವಲ್ಲಭರು ತಮ್ಮ ಬೌದ್ಧಿಕ ಮೇಧಾವಿತನವನ್ನು ಕಡೆಯವರೆಗೂ ಶಾಸ್ತ್ರಗ್ರಂಥಗಳ ಭಾಷ್ಯಗಳನ್ನು ರಚಿಸುವುದಕ್ಕೆ ಮತ್ತು ಇತರ ಸಿದ್ಧಾಂತಗಳ ಪಂಡಿತರೊಡನೆ ವಾದಮಾಡುವುದಕ್ಕೆ ಬಳಸಿಕೊಂಡರು. ಶ್ರೀಚೈತನ್ಯರು ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ಪತ್ನಿಯನ್ನು ಮತ್ತು ಕುಟುಂಬವನ್ನು ತ್ಯಾಗಮಾಡಿ, ಸಂನ್ಯಾಸಿಗಳಾದರು. ಆದರೆ ವಲ್ಲಭರು ತಮ್ಮ ಬಾಳಿನ ಕಡೆಯ ಒಂದು ವರ್ಷದವರೆಗೂ ಗೃಹಸ್ಥರಾಗಿಯೇ ಉಳಿದಿದ್ದರು. ಭಾಗವತ ಧರ್ಮದ ಈ ಶ್ರೇಷ್ಠ ಆಚಾರ್ಯರಿಬ್ಬರೂ ಸಮಕಾಲೀನರು ಎನ್ನುವುದು ಅದೃಷ್ಟವೇ ಸರಿ. ಒಬ್ಬರು ಭಾರತದ ಪೂರ್ವಭಾಗವನ್ನು (ಬಂಗಾಳ) ತಮ್ಮ ಭಕ್ತಿಪ್ರವಾಹದಿಂದ ತುಂಬಿದರೆ, ಇನ್ನೊಬ್ಬರು ಪಶ್ಚಿಮ ಭಾರತದಲ್ಲಿ (ಗುಜರಾತ್ ಮತ್ತು ರಾಜಸ್ಥಾನ) ಭಕ್ತಿ ಆಂದೋಲನಕ್ಕೆ ಭದ್ರ ಬುನಾದಿಯನ್ನು ಹಾಕಿದರು.

### ನಿವೃತ್ತಿ ಜೀವನ ಮತ್ತು ಭಾಷ್ಯಗಳ ರಚನೆ

ತಮ್ಮ ಮೂರನೆಯ ತೀರ್ಥಯಾತ್ರೆಯನ್ನು ನಾಲ್ಕು ವರ್ಷಗಳ ಸುದೀರ್ಘಕಾಲ ಕೈಗೊಂಡ ಮೇಲೆ ವಲ್ಲಭರು ವಾರಾಣಸಿಗೆ ಬಂದು ತಮ್ಮ ಕುಟುಂಬವನ್ನು ಕೂಡಿಕೊಂಡರು. ತಮ್ಮ ತಾಯಿ, ಹೆಂಡತಿ ಮತ್ತು ಇಬ್ಬರು ಮಕ್ಕಳೊಡನೆ ಇರಲು ಆರಂಭಿಸಿದರು. ವಾರಾಣಸಿಯಲ್ಲಿ ಅವರು ಕೆಲವು ವರ್ಷಗಳ ಕಾಲ ಮಾತ್ರವೇ ನೆಲೆಸಿದರು. ಈ ಸಮಯದಲ್ಲಿ ಅವರು ಶಂಕರ ವೇದಾಂತದ ಅನುಯಾಯಿಗಳಾದ ಹಲವು ವಿದ್ವಾಂಸರ ಜೊತೆಗೆ ವಾಕ್ಯಾರ್ಥವನ್ನು ನಡೆಸಿದರು. ಅವರ ಸಿದ್ಧಾಂತದಲ್ಲಿ ಬ್ರಹ್ಮತತ್ತ್ವಕ್ಕಿಂತಲೂ ಮಾಯಾವಾದಕ್ಕೇ ಪ್ರಾಶಸ್ತ್ಯವನ್ನು ಕೊಟ್ಟಿರುವುದನ್ನು ಎತ್ತಿತೋರಿಸಿದರು. ಇದು ವಲ್ಲಭರ ಸಿದ್ಧಾಂತವಾದ ಶುದ್ಧಾದ್ವೈತಕ್ಕೆ ವಿರುದ್ಧವಾದ ತತ್ತ್ವವಾಗಿತ್ತು. ವಲ್ಲಭರ ಸಿದ್ಧಾಂತದಲ್ಲಿ ಮಾಯೆಗೆ ಸ್ಥಾನವೇ ಇಲ್ಲ. ಸತ್ಯತತ್ತ್ವವೆಂದರೆ ಅದು ಬ್ರಹ್ಮವೊಂದೇ ಎಂಬುದು ಅವರ ಅಭಿಪ್ರಾಯ. ಈ ವಾದಗಳಲ್ಲಿ ಅವರು ಹತ್ತುಹಲವು ಅದ್ವೈತ ಪಂಡಿತರನ್ನು ಸೋಲಿಸಿದರು. ಅದ್ವೈತ ಶಾಖೆಯು ಪಾಂಡಿತ್ಯ ಮತ್ತು ಸಾಂಪ್ರದಾಯಿಕತೆಗಳ ಭದ್ರಕೋಟೆಯಾಗಿತ್ತು. ಹಾಗಿದ್ದರೂ, ಅದರಿಂದ ಹಲವು ಪಂಡಿತರನ್ನು ತಮ್ಮ ಕಡೆಗೆ ಸೆಳೆದುಕೊಳ್ಳಲು ಶಕ್ತರಾದರು. ವಲ್ಲಭರು ಅಂಥ ಉತ್ಕಟ ಸ್ವಪಕ್ಷಪಾತಿಗಳೇನೂ ಆಗಿರಲಿಲ್ಲ ಹಾಗೂ ಅವರು ತಮ್ಮ ಮತದ ಪ್ರಸಾರದ ವಿಷಯದಲ್ಲಿ ಬಹಳ ಆಕ್ರಮಣಕಾರಿ ಮನೋಭಾವದವರೂ ಆಗಿರಲಿಲ್ಲ. ಹೀಗಾಗಿ ತಮ್ಮ ಇಳಿ ವಯಸ್ಸಿನಲ್ಲಿ ವಾರಾಣಸಿಯಲ್ಲಿ ನೆಲೆಸಿದ್ದ ಬೌದ್ಧಿಕ ಪರಿಸರದಿಂದ ನಿವೃತ್ತರಾಗಲು ಬಯಸಿದರು. ಅಲಹಾಬಾದಿನ ಹತ್ತಿರವಿರುವ ಅಡೇಲ್ ಎಂಬ ಗ್ರಾಮದಲ್ಲಿ ನೆಲೆಸಿದರು. ಆ ಗ್ರಾಮವು ಯಮುನಾ ಮತ್ತು ಗಂಗಾನದಿಗಳ ಸಂಗಮದ ಸನಿಹದಲ್ಲಿಯೇ ಇದೆ. ಇದು ತನ್ನ ಪ್ರಾಕೃತಿಕ ಸೌಂದರ್ಯಕ್ಕೆ ಪ್ರಸಿದ್ಧವಾಗಿದ್ದು, ಅಲ್ಲಿ ಮೂರು ಬಗೆಯ ತುಳಸಿ ಗಿಡಗಳು ಬೆಳೆಯುತ್ತಿದ್ದವು. ವಲ್ಲಭರು ತಮ್ಮ ಜೀವಿತದ ಕಡೆಯ ಇಪ್ಪತ್ತು ವರ್ಷಗಳನ್ನು ತಮ್ಮ ಕುಟುಂಬ ಮತ್ತು ಆಪ್ತ ಶಿಷ್ಯರ ಒಡಗೂಡಿ ಅಲ್ಲಿಯೇ ಕಳೆದರು. ಭಾಗವತ ಧರ್ಮದ ಬೋಧನೆಗಾಗಿ ಕೆಲವೊಮ್ಮೆ ಅಲ್ಲಿಲ್ಲಿ ಹೋಗಿಬರುತ್ತಿದ್ದರು, ಅಷ್ಟೇ.

*(ಮುಂದುವರಿಯುವುದು)*

# ಹರಿದಾಸ

ಕಥೆ : ರೇವತಿ

ಚಿತ್ರ: ಸದಾಶಿವಂ




4
ಒಂದು ಸಲ ಹರಿದಾಸನು ಬೀದಿಯಲ್ಲಿ ಭಜನೆ ಹಾಡುತ್ತಾ ಹೋಗುತ್ತಿದ್ದ. ಭಕ್ತರೆಲ್ಲರೂ ನೋಡುತ್ತಿದ್ದಂತೆಯೇ ಒಬ್ಬ ಅಹಂಕಾರಿಯಾದ ಜಮೀನ್ದಾರ ಆ ದಾರಿಯಲ್ಲೇ ಬಂದ.
ನನ್ನನ್ನು ನೋಡಿಯೂ ತಲೆಬಾಗಿ ನಮಸ್ಕಾರ ಮಾಡದೆ, ನನ್ನನ್ನು ನಿರ್ಲಕ್ಷಿಸುತ್ತಿರುವ ಈ ಮನುಷ್ಯ ಯಾರಿವನು?
ನನಗೆ ಗೌರವ ಸಲ್ಲಿಸದ ಈ ಇವನನ್ನು ಕಾಡಿಗೆ ಎಳೆದುಕೊಂಡು ಹೋಗಿ ಅಲ್ಲೇ ಬಿಟ್ಟುಬಿಡಿ.
5
ಹರಿದಾಸನನ್ನು ಕಾಡಿನಲ್ಲಿ ಬಿಟ್ಟ ನಂತರವೂ ಅವನು ಭಜನೆ ಮಾಡುವುದನ್ನು ನಿಲ್ಲಿಸಲಿಲ್ಲ. ಜಮೀನ್ದಾರನ ಸೇವಕರು ಮರಗಳ ಹಿಂದೆ ಅಡಗಿ ನಿಂತು ಎಲ್ಲವನ್ನೂ ಗಮನಿಸುತ್ತಿದ್ದರು.
ನೋಡು, ಹರಿದಾಸನ ಹಾಡನ್ನು ಹುಲಿ, ಸಿಂಹಗಳೂ ಮೈಮರೆತು ನಿಂತು ಕೇಳುತ್ತಿವೆ. ಅವನು ನಿಜವಾದ ಭಕ್ತನೇ ಆಗಿದ್ದಾನೆ. ಬಾ, ಈ ವಿಷಯವನ್ನು ನಾವು ನಮ್ಮ ಒಡೆಯನಿಗೆ ತಿಳಿಸೋಣ.
ಜಮೀನ್ದಾರನು ತನ್ನ ಸೇವಕರ ಮಾತುಗಳನ್ನು ನಂಬಲಿಲ್ಲ. ಹರಿದಾಸನನ್ನು ಇನ್ನಷ್ಟು ಪರೀಕ್ಷಿಸಬೇಕೆಂದು ಅವನನ್ನು ಪ್ರಚೋದಿಸಲು ಒಬ್ಬಾಕೆ ಕೆಟ್ಟ ಚಾರಿತ್ರ್ಯವುಳ್ಳ ಹೆಂಗಸನ್ನು ಅವನ ಬಳಿಗೆ ಕಳುಹಿಸಿದನು.
6
ಹರಿದಾಸನು ತನ್ನ ಮನೆಯ ಮುಂದೆ ಕುಳಿತು ದೇವರ ನಾಮವನ್ನು ಜಪಿಸುತ್ತಿದ್ದ.
ಸ್ವಾಮಿ, ನೀವು ಆಹಾರವನ್ನೂ ಸೇವಿಸದೆ ಸತತವಾಗಿ ಜಪ ಮಾಡುತ್ತಿದ್ದರೆ ನಿಮಗೆ ದಣಿವಾಗದೆ? ಈ ಹಾಲನ್ನಾದರೂ ಕುಡಿಯಿರಿ.
ಅಮ್ಮಾ ನೀನಾರು? ದೇವರ ನಾಮವೆಂಬ ಅಮೃತವನ್ನು ಕುಡಿಯುತ್ತಿರುವವನಿಗೆ ದಣಿವು ಹೇಗಾದೀತಮ್ಮಾ? ನೀನೂ ಬಾ, ನನ್ನೊಂದಿಗೆ ಭಜನೆ ಮಾಡು. ಆಗ ಮಾತ್ರವೇ ನಿನಗೆ ಭಗವಂತನ ನಾಮದ ರುಚಿ ಅರ್ಥವಾದೀತು.


7
ಆಕೆ ಹರಿದಾಸನೊಂದಿಗೆ ಭಜನೆ ಮಾಡಿದಂತೆ ನಟಿಸತೊಡಗಿದಳು. ಆದರೂ ಶ್ರೀಕೃಷ್ಣನ ದಿವ್ಯಲೀಲೆ ಅವಳ ಮನಸ್ಸನ್ನು ಸೂರೆಗೊಂಡಿತು. ಅವಳಲ್ಲಿದ್ದ ದುರುದ್ದೇಶವೆಲ್ಲ ಈಗ ಮರೆತುಹೋಯಿತು. ಒಂದು ದಿನ ...
ಇದೇನು ಆಶ್ಚರ್ಯ! ತರುಣಿಯಾದ ಹೆಂಗಸಿನ ಪಕ್ಕದಲ್ಲೇ ಇದ್ದರೂ, ಈತನಿಗೆ ಅವಳತ್ತ ಗಮನವೇ ಇಲ್ಲ! ದೇವರ ನಾಮವನ್ನೇ ಉಸಿರಿನಂತೆ ಎಡಬಿಡದೆ ಜಪಿಸುತ್ತಿದ್ದಾನೆ. ಅವನ ಸೇವೆ ಮಾಡುವ ಮೂಲಕ ಮಾತ್ರವೇ ನಾನು ಪರಿಶುದ್ಧಳಾಗಬಹುದು.
ಅವಳು ಹರಿದಾಸನ ಮುಂದೆ ತಲೆಬಾಗಿ ನಮಸ್ಕರಿಸಿ, ಅವನ ಕ್ಷಮೆ ಬೇಡಿದಳು. ಮುಂದೆ ಅವಳು ಹರಿದಾಸನ ಶಿಷ್ಯೆಯಾಗಿ 'ಹರಿದಾಸಿ' ಎಂಬ ಹೆಸರಿನಿಂದ ಕರೆಯಲ್ಪಟ್ಟಳು.
8
ಆ ಹೆಂಗಸು ಕೂಡ ಅವನ ಜೊತೆಗೆ ಸೇರಿಕೊಂಡು, ಭಜನೆ ಹೇಳಿಕೊಂಡು ಬೀದಿಯಲ್ಲೆಲ್ಲಾ ಸುತ್ತಾಡುತ್ತಿದ್ದಾಳಲ್ಲ!
ಅಷ್ಟೇ ಅಲ್ಲ, ಧಣಿಗಳೆ! ಅವಳು ತನ್ನ ಎಲ್ಲ ಸೊತ್ತನ್ನೂ ಬಡವರಿಗೆ ದಾನ ಮಾಡಿಬಿಟ್ಟಳು.
ಅವರನ್ನು ಸುಮ್ಮನೆ ಬಿಡಬಾರದು. ನಾನು ಸರ್ಕಾರಿ ಅಧಿಕಾರಿಗಳಾದ ಘಾಜಿಗಳಿಗೆ ದೂರು ನೀಡುತ್ತೇನೆ.
9
ಹರಿದಾಸ, ನೀನು ಮುಸ್ಲಿಮನಾಗಿ ಹುಟ್ಟಿ ಈ ರೀತಿಯ ಜೀವನ ನಡೆಸುತ್ತಿರುವುದು ಮಹಾಪಾಪ. ನೀನು ಹಿಂದುವಾಗಿದ್ದೀಯಾ, ಅಲ್ಲದೆ ಹೆಂಗಸಿನ ಜೊತೆಗೆ ಹಾಡುತ್ತಾ ಮೋಜು ಮಾಡುತ್ತಿದ್ದೀಯಾ.
ಘಾಜಿಯವರೆ, ದೇವರ ನಾಮವನ್ನು ಹಾಡುವುದೆಂದರೆ ನನಗೆ ಉಸಿರಾಡಿದಂತೆ. ಆಗ ನಾನು ಆಳಕ್ಕೆ ಮುಳುಗಿ ಶ್ರೀಕೃಷ್ಣನ ಸಾನ್ನಿಧ್ಯವನ್ನು ಅನುಭವಿಸುತ್ತೇನೆ. ಮನುಷ್ಯ ಮಾತ್ರವೇ ಅಲ್ಲ, ಪ್ರಾಣಿಗಳೂ ಇಂಥ ಅನುಭವವನ್ನು ಹೊಂದಲು ಯತ್ನಿಸುತ್ತವೆ.
10
ಪೆದ್ದುಪೆದ್ದಾಗಿ ಮಾತನಾಡಬೇಡ. ನೀನು ಕ್ಷಮೆ ಕೇಳಬೇಕು, ಇನ್ನು ಮುಂದೆ ಹೀಗೆ ಹಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಬೇಕು.
ಈ ಹಠಮಾರಿಗೆ ಲಾಠಿ ಏಟು ಕೊಡಿ, ಆಮೇಲೆ ನದಿಗೆ ಎಸೆಯಿರಿ.
ಉಸಿರಾಡಲಾರೆ ಎಂದು ಪ್ರತಿಜ್ಞೆ ಮಾಡಿ ಯಾರಾದರೂ ಬದುಕಬಲ್ಲರೆ?
11
ಹರಿದಾಸನಿಗೆ ಚೆನ್ನಾಗಿ ಲಾಠಿ ಏಟು ಕೊಟ್ಟು, ಅವನನ್ನು ನದಿಗೆ ಎಸೆದುಬಿಟ್ಟರು. ಅವನು ನೀರಿನಲ್ಲಿ ತೇಲುತ್ತಿದ್ದಾಗ ಮರದ ರೆಂಬೆಯೊಂದಕ್ಕೆ ಸಿಲುಕಿಕೊಂಡ. !
ಹರೇ ರಾಮ, ಹರೇ ಕೃಷ್ಣ
ಆ ದಾರಿಯಲ್ಲೇ ದೋಣಿಯಲ್ಲಿ ಪ್ರಯಾಣ ಮಾಡುತ್ತಿದ್ದ ಘಾಜಿ ಈ ದೃಶ್ಯವನ್ನು ಕಂಡು, ಹರಿದಾಸನನ್ನು ರಕ್ಷಿಸಿದ.




''ನಿನಗೆ ಬಿಡುವಾದಾಗಲೆಲ್ಲ ಉತ್ಕಟ ಭಾವದಿಂದ ದೇವರನ್ನು ಕರೆ, ವ್ಯಾಕುಲತೆಯಿಂದ ಅವನನ್ನು ಪ್ರಾರ್ಥಿಸು. ನಿನ್ನ ಎಲ್ಲ ದುಃಖಗಳನ್ನೂ ಅವನ ಮುಂದೆ ನಿವೇದಿಸು. ಸರಿಯಾದ ಸಮಯದಲ್ಲಿ ಅವನು ನಿನಗೆ



ಮುಕ್ತಿ ನೀಡಿ, ಆನಂದಸಾಗರದಲ್ಲಿ ಈಜಾಡುವಂತೆ ಮಾಡುವನು. ಭಗವಂತನ ಕೃಪೆಗೆ ಸಾಧ್ಯವಾಗದ ಕಾರ್ಯ ಯಾವುದಿದೆ? ನಿನ್ನ ತಲೆಯ ಮೇಲೆ ಅವನ ಕೃಪೆಯೆಂಬ ಗಾಳಿ ಹಗಲೂರಾತ್ರಿ ನಿರಂತರ ಬೀಸುತ್ತಿದೆ.''

— ಶ್ರೀರಾಮಕೃಷ್ಣರು







ಸುದ್ದಿ ಸಂಚಯ

# ಪೊನ್ನಂಪೇಟೆ ಶ್ರೀರಾಮಕೃಷ್ಣ ಸೇವಾಶ್ರಮ ಆಸ್ಪತ್ರೆಯ ಅಮೃತ ಮಹೋತ್ಸವ ಸಮಾರಂಭ

ಪೊನ್ನಂಪೇಟೆ ರಾಮಕೃಷ್ಣ ಶಾರದಾಶ್ರಮದ ವೈದ್ಯಕೀಯ ಘಟಕವಾದ ಶ್ರೀರಾಮಕೃಷ್ಣ ಸೇವಾಶ್ರಮ ಆಸ್ಪತ್ರೆಯ ಅಮೃತ ಮಹೋತ್ಸವ ಸಮಾರಂಭವು ಮೂರು ದಿನಗಳ ಕಾರ್ಯಕ್ರಮಗಳೊಂದಿಗೆ 2018ರ ಮೇ 23 ರಿಂದ 25ರ ವರೆಗೆ ನಡೆಯಿತು. ಮಹೋತ್ಸವದ ಅಂಗವಾಗಿ ಆಸ್ಪತ್ರೆಯ ಪ್ರಕೃತಿ ಚಿಕಿತ್ಸಾ ವಿಭಾಗದ ಹೊಸ ಕಟ್ಟಡ '**ವಿವೇಕಾನಂದ ಆರೋಗ್ಯಧಾಮ**'ವು ಉದ್ಘಾಟಿಸಲ್ಪಟ್ಟಿತು. ಇದರೊಂದಿಗೆ **ಸಾರ್ವಜನಿಕ ಸಭೆ, ಉಚಿತ ಮಲ್ಟಿ ಸ್ಪೆಷಾಲಿಟಿ ವೈದ್ಯಕೀಯ ಶಿಬಿರ**, ಹಾಗೂ **ವೈದ್ಯಕೀಯ ವಿಚಾರ ಸಂಕಿರಣ** ನಡೆಯಿತು.

ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಲ್ಲಿ ಒಬ್ಬರಾದ ಶ್ರೀಮತ್ ಸ್ವಾಮಿ ಸುಹಿತಾನಂದಜಿ ಮಹಾರಾಜ್ ಅವರ ದಿವ್ಯ ಸಾನ್ನಿಧ್ಯದಿಂದ ಈ ಸಮಾರಂಭವು ಪುನೀತವಾಯಿತು. ಮಹಾಸಂಘದ ಸಹಕಾರ್ಯದರ್ಶಿಗಳಲ್ಲಿ ಒಬ್ಬರಾದ ಪೂಜ್ಯ ಸ್ವಾಮಿ ಬೋಧಸಾರಾನಂದಜಿ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಇದರೊಂದಿಗೆ ಬೆಂಗಳೂರು, ಲಕ್ನೋ, ಮುಂಬಯಿ, ಜಮ್ಮು, ಮೈಸೂರು, ತಿರುವನಂತಪುರ, ನಟ್ಟರಾಂಪಳ್ಳಿ, ಚೆನ್ನೈ ಮತ್ತಿತರ ಶಾಖಾಕೇಂದ್ರಗಳಿಂದ ಬಂದು ಹಲವು ಮಂದಿ ಸ್ವಾಮೀಜಿಗಳು, ಸಮೀಪದ ಪ್ರದೇಶಗಳಿಂದ ಬಂದ ಭಕ್ತರುಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದರು.

**ಉದ್ಘಾಟನೆ: ೨೩ ಮೇ, ೨೦೧೮:** ಆಶ್ರಮದ ಶಾಂಭವಾನಂದ ಸಭಾಂಗಣದಲ್ಲಿ ನಡೆದ ಅಮೃತ ಮಹೋತ್ಸವ ಸಮಾರಂಭದ ಉದ್ಘಾಟನೆಯನ್ನು ಸ್ವಾಮಿ ಸುಹಿತಾನಂದಜಿಯವರು ನೆರವೇರಿಸಿದರು. ವೇದಿಕೆಯಲ್ಲಿ ಮೈಸೂರು ಮೆಡಿಕಲ್ ಕಾಲೇಜಿನ ಪ್ರತಿನಿಧಿಗಳು, ಸ್ವಾಮಿ ಆತ್ಮವಿದಾನಂದಜಿ (ವಿಶಾಖಪಟ್ಟಣಂ), ಸ್ವಾಮಿ ಮೋಕ್ಷವ್ರತಾನಂದಜಿ (ತಿರುವನಂತಪುರ), ಸ್ವಾಮಿ ನಿರಂತರಾನಂದಜಿ (ಜಮ್ಮು), ಸ್ವಾಮಿ ಸತ್ಯದೇವಾನಂದಜಿ (ಮುಂಬೈ), ಸ್ವಾಮಿ ಜಿತಕಾಮಾನಂದಜಿ (ಮಂಗಳೂರು), ವಿರಾಜಪೇಟೆಯ ಕಲಂಚೇರಿ ಮಠದ ಶ್ರೀ ಶಾಂತ ಮಲ್ಲಿಕಾರ್ಜುನ ಸ್ವಾಮೀಜಿಯವರು ಉಪಸ್ಥಿತರಿದ್ದರು. ಪೊನ್ನಂಪೇಟೆ ಫಾರೆಸ್ಟ್ರಿ ಕಾಲೇಜಿನ ವಿಭಾಗ ಮುಖ್ಯಸ್ಥರಾದ ಡಾ. ಸಿ.ಜಿ.ಕುಶಾಲಪ್ಪನವರು ಪೊನ್ನಂಪೇಟೆ ನಾಗರಿಕರ ಪರವಾಗಿ ಸ್ವಾಮಿ ಸುಹಿತಾನಂದಜಿಯವರಿಗೆ ಬಿನ್ನವತ್ತಳೆ ಸಲ್ಲಿಸಿದರು. ಸ್ವಾಮೀಜಿಯವರು ಸೇವಾಶ್ರಮ ಆಸ್ಪತ್ರೆಯ ಅವಿರತ ಸೇವೆಯನ್ನು ಶ್ಲಾಘಿಸಿ ಮಾತನಾಡಿದರು. ಇತರ ಸ್ವಾಮೀಜಿಗಳೂ ಕೂಡ ಈ ಸಂದರ್ಭದಲ್ಲಿ ಮಾತನಾಡಿದರು.

**ವಿವೇಕಾನಂದ ಆರೋಗ್ಯಧಾಮದ ಉದ್ಘಾಟನೆ: ೨೪ ಮೇ, ೨೦೧೮:** ಶ್ರೀರಾಮಕೃಷ್ಣರ ವಿಶೇಷ ಪೂಜೆ, ಹೋಮಗಳೊಂದಿಗೆ ಹೊಸ ಕಟ್ಟಡದ ಉದ್ಘಾಟನೆ ಆರಂಭಗೊಂಡಿತು. ವೇದಘೋಷಗಳ ಹಿನ್ನೆಲೆಯಲ್ಲಿ ಸ್ವಾಮಿ ಸುಹಿತಾನಂದಜಿಯವರು ಕಟ್ಟಡವನ್ನು ಉದ್ಘಾಟಿಸಿದರು. ಸ್ವಾಮಿ ಬೋಧಸಾರಾನಂದಜಿ ಕಟ್ಟಡದ ಮೊದಲನೇ ಮಹಡಿ 'ಕೊಕ್ಕಂಗಡ ಪೊನ್ನಪ್ಪ ಮತ್ತು ಪಾರ್ವತಿ ಬ್ಲಾಕ್'ಅನ್ನು ಉದ್ಘಾಟಿಸಿದರು.

ಪೂರ್ವಾಹ್ನ 11.00 ರ ಸುಮಾರಿಗೆ ಆಶ್ರಮದಲ್ಲಿ **ಸಾರ್ವಜನಿಕ ಸಭೆ** ನಡೆಯಿತು. ಸ್ವಾಮಿ ಬೋಧಸಾರಾನಂದಜಿಯವರು ಪ್ರಾಸ್ತಾವಿಕ ಭಾಷಣ ಮಾಡಿದರು. ಸ್ವಾಮಿ ಜಗದಾತ್ಮಾನಂದಜಿಯವರ ಭಾಷಣವನ್ನು ಓದಲಾಯಿತು. ಬಳಿಕ ಸ್ವಾಮಿ ಮುಕ್ತಿನಾಥಾನಂದಜಿ ಹಾಗೂ ಹಾಗೂ ರಾಘವೇಶಾನಂದಜಿ ಸಭಿಕರನ್ನು ಉದ್ದೇಶಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಕಟ್ಟಡ ನಿರ್ಮಾಣಕ್ಕೆ ನೆರವಾದ ದಾನಿಗಳು, ಇಂಜಿನಿಯರ್, ಇತರ ಕೆಲಸಗಾರರನ್ನು ಸನ್ಮಾನಿಸಲಾಯಿತು. ಕೊನೆಯಲ್ಲಿ ಸ್ವಾಮಿ ಸುಹಿತಾನಂದಜಿ ಮಹಾರಾಜ್ ಆಶೀರ್ವಚನ ನೀಡಿದರು.

**ದಿನಾಂಕ ೨೫ ಮೇ, ೨೦೧೮:** ಸ್ವಾಮಿ ಬೋಧಸಾರಾನಂದಜಿ ಅವರು **ಮಲ್ಟಿ ಸ್ಪೆಷಾಲಿಟಿ ವೈದ್ಯಕೀಯ ಶಿಬಿರ**ವನ್ನು ಉದ್ಘಾಟಿಸಿದರು. ಇದು ಈ ಸಂದರ್ಭಕ್ಕಾಗಿಯೇ ವಿಶೇಷವಾಗಿ ಆಯೋಜಿಸಿದ ಶಿಬಿರವಾಗಿತ್ತು. ಮೈಸೂರಿನ ನಾರಾಯಣ ಹೃದಯಾಲಯ, ಬೆಂಗಳೂರಿನ ಜೆ.ಎಸ್.ಎಸ್.ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರಿನ ಶೇಖರ ನೇತ್ರ ಚಿಕಿತ್ಸಾಲಯ, ವಿರಾಜಪೇಟೆಯ ಕೂರ್ಗ್ ಇನ್ಸ್ಟಿಟ್ಯೂಟ್ ಆಫ್ ಡೆಂಟಲ್ ಸೈನ್ಸ್ ಈ ಸಂಸ್ಥೆಗಳಿಂದ ನುರಿತ ವೈದ್ಯರುಗಳು ಬಂದಿದ್ದರು. ಸ್ವಾಮಿ ಮುಕ್ತಿನಾಥಾನಂದಜಿಯವರು ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ಇದರಲ್ಲಿ ವಿವಿಧ ಕಾಲೇಜುಗಳಿಂದ ಬಂದ ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರು ಭಾಗವಹಿಸಿದ್ದರು.







Managing Editor : Swami Atmajnananda Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

VIVEKA PRABHA (KANNADA MONTHLY)
July 2018, Vol.18, No.07, No.of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2018-20. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2018-20




Printed at mayur graphics,Bangalore